RNI No. **KARBIL/2001/47147**

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**


| ಸಂಪುಟ ೧೪೮<br>Volume 148 | ಬೆಂಗಳೂರು, ಗುರುವಾರ, ಮೇ ೧೬, ೨೦೧೩ (ವೈಶಾಖ ೨೬, ಶಕ ವರ್ಷ ೧೯೩೫)<br>Bangalore, Thursday, May 16, 2013 (Vaishakha 26, Shaka Varsha 1935) | ಸಂಚಿಕೆ ೨೦<br>Issue 20 |
|---|---|---|


## ಭಾಗ ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ತಜ್ಞ ವೈದ್ಯರು/ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಸಲ್ಲಿಸಿರುವ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:**

1. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ : ಜೆಆರ್‌ಓ (4) 196/2012-13, ದಿನಾಂಕ 11-03-2011
2. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ : ಜೆಆರ್‌ಓ (2) 62/2011-12, ದಿನಾಂಕ 11-11-2011
3. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ : ಜೆಆರ್‌ಓ (2ಎ) 109/2011-12, ದಿನಾಂಕ 16-12-2011
4. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರ ಪತ್ರ ಸಂಖ್ಯೆ : ಜೆಆರ್‌ಓ (2ಎ) 98/2011-12, ದಿನಾಂಕ 13-12-2011

**ಪ್ರಸ್ತಾವನೆ:**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ತಜ್ಞ /ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಸರ್ಕಾರದ ವಿವಿಧ ಆದೇಶಗಳಲ್ಲಿ ನೇಮಕಾತಿ ಹೊಂದಿದ ನಾಲ್ವರು ವೈದ್ಯಾಧಿಕಾರಿಗಳು ವೈಯಕ್ತಿಕ ಕಾರಣಗಳಿಂದ ವೈದ್ಯಾಧಿಕಾರಿ ಹುದ್ದೆಗೆ ರಾಜೀನಾಮೆ ಸಲ್ಲಿಸಿ, ಅಂಗೀಕರಿಸುವಂತೆ ಕೋರಿದ್ದು, ಇವರುಗಳ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಹಾಗೂ ಸರ್ಕಾರಕ್ಕೆ ಯಾವುದೇ ಬೇಬಾಕಿ ಇರುವುದಿಲ್ಲವಾದ್ದರಿಂದ ಅವರುಗಳ ರಾಜೀನಾಮೆಯನ್ನು ಅಂಗೀಕರಿಸುವಂತೆ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು ಇವರು ಮೇಲೆ ಓದಲಾದ ಪತ್ರಗಳಲ್ಲಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಆಯುಕ್ತರ ಪ್ರಸಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆಕುಕ 3 ಹೆಚ್‌ಎಸ್‌ಹೆಚ್ 2012, ಬೆಂಗಳೂರು, ದಿನಾಂಕ : 15ನೇ ಏಪ್ರಿಲ್ 2013**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಈ ಕೆಳಕಂಡ ತಜ್ಞ /ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ವೈಯಕ್ತಿಕ ಕಾರಣದಿಂದ ಹುದ್ದೆಗೆ ನೀಡಿರುವ ರಾಜೀನಾಮೆಯನ್ನು ಅವರುಗಳ ಹೆಸರಿನ ಮುಂದೆ ಕಾಲಂ (4) ರಲ್ಲಿ ತೋರಿಸಿರುವ ದಿನಾಂಕದಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

| ಕ್ರಮ ಸಂಖ್ಯೆ | ತಜ್ಞ/ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹೆಸರು ಮತ್ತು ಕಾರ್ಯನಿರ್ವಹಿಸುತ್ತಿದ್ದ ಸ್ಥಳ | ಸೇವೆಗೆ ಸೇರಿದ ದಿನಾಂಕ | ರಾಜೀನಾಮೆ ಅಂಗೀಕರಿಸಿದ ದಿನಾಂಕ |
|---|---|---|---|
| **1** | **2** | **3** | **4** |
| 1 | ಡಾ॥ ಸುನೀಲ್‌ಕುಮಾರ್ ಕಾಂಬಳೆ<br>ಪ್ರಾ.ಆ.ಕೇಂದ್ರ, ತಡಕಲ್, ಆಳಂದ ತಾಲ್ಲೂಕು, ಗುಲ್ಬರ್ಗ ಜಿಲ್ಲೆ | 21-08-2010 | 02-05-2012 |

| ಕ್ರಮ ಸಂಖ್ಯೆ | ತಜ್ಞ/ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹೆಸರು ಮತ್ತು ಕಾರ್ಯನಿರ್ವಹಿಸುತ್ತಿದ್ದ ಸ್ಥಳ | ಸೇವೆಗೆ ಸೇರಿದ ದಿನಾಂಕ | ರಾಜೀನಾಮೆ ಅಂಗೀಕರಿಸಿದ ದಿನಾಂಕ |
|---|---|---|---|
| 1 | 2 | 3 | 4 |
| 2 | ಡಾ॥ ಸಿ.ಎನ್. ಭಾನುಪ್ರಕಾಶ್<br>ಸ.ಆ.ಕೇಂದ್ರ, ಅಶೋಕಪುರಂ, ಮೈಸೂರು | 10–01–2008 | 30–09–2010 |
| 3 | ಡಾ॥ ರವಿ ಎ. ಉಪಾಧ್ಯಾಯ<br>ಪ್ರಾ.ಆ.ಕೇಂದ್ರ, ಬೆಟ್ಟಗೆರೆ, ಚಿಕ್ಕಮಗಳೂರು ಜಿಲ್ಲೆ, | 18–03–2006 | 01–04–2011 |
| 4 | ಡಾ॥ ಕೃಷ್ಣಪ್ರಸಾದ್ ಕೆ.<br>ನೇತ್ರ ತಜ್ಞರು, ಜಿಲ್ಲಾ ಆಸ್ಪತ್ರೆ, ಉಡುಪಿ | 07–07–2007 | 01–05–2010 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಚಿಕ್ಕೇಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

**P.R. 511**

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಕಛೇರಿ ಕಟ್ಟಡ ನಿರ್ಮಾಣಕ್ಕೆ ಡಾ॥ ರಾಜ್‌ಕುಮಾರ್ ರಸ್ತೆಯಲ್ಲಿರುವ ಲೋಕೋಪಯೋಗಿ ಇಲಾಖೆಯ ಸುಪರ್ದಿನಲ್ಲಿರುವ ಬಿ.ಇ.ಪಿ. ಆವರಣದಲ್ಲಿನ 2955 ಚ.ಮೀ. ವಿಸ್ತೀರ್ಣದ ನಿವೇಶನವನ್ನು ಗುತ್ತಿಗೆ ಆಧಾರದ ಮೇಲೆ ಕೆ.ಆರ್.ಡಿ.ಸಿ.ಎಲ್. ಸಂಸ್ಥೆಗೆ 30 ವರ್ಷಗಳ ವರೆಗೆ ಗುತ್ತಿಗೆ ನೀಡುವ ಕುರಿತು.

**ಓದಲಾಗಿದೆ:** 1. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಇವರ ಪತ್ರ ಸಂ: ಕರನಿಧಿ/ವ್ಯನಿ/ಡಿಇ–65/2012–13, ದಿನಾಂಕ 29–11–2012.

2. ಮುಖ್ಯ ಇಂಜಿನಿಯರ್, ಸಂಕ(ದ), ಬೆಂಗಳೂರು ಇವರ ಪತ್ರ ಸಂ: ಮುಅ: ಸಂಕದ:ಸಇ–2: 2011–12, ದಿನಾಂಕ : 25–01–2012.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಇವರು ಸರ್ಕಾರದ ಪತ್ರ ಸಂ : ಲೋಇ 119 ಇಎಪಿ 2010, ದಿನಾಂಕ 23–11–2010 ರಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಆಡಳಿತ ಕಛೇರಿ ಕಟ್ಟಡ ನಿರ್ಮಿಸುವ ಸಲುವಾಗಿ ಡಾ॥ ರಾಜ್‌ಕುಮಾರ್ ರಸ್ತೆಯಲ್ಲಿರುವ ಲೋಕೋಪಯೋಗಿ ಇಲಾಖೆಯ ಸುಪರ್ದಿನಲ್ಲಿರುವ ಸುಮಾರು 2167 ಚ.ಮೀ. ವಿಸ್ತೀರ್ಣದ ನಿವೇಶನವನ್ನು ಲೀಸ್ ಆಧಾರದ ಮೇಲೆ ನೀಡಲು ಅನುಮೋದನೆ ನೀಡಲಾಗಿದೆ. ಈ ಸಂಬಂಧ ದಿನಾಂಕ 26–11–2012 ರಂದು ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಅಧಿಕಾರಿಗಳೊಂದಿಗೆ ಸಂಯುಕ್ತವಾಗಿ ಪ್ರಸ್ತಾಪಿತ ನಿವೇಶನವನ್ನು ಪರಿವೀಕ್ಷಿಸಿ ಒಟ್ಟು 2167 ಚ.ಅಡಿ ನಿವೇಶನವನ್ನು ಹಸ್ತಾಂತರಿಸಲು ಸಹಮತಿಸುತ್ತಾ, ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರಿಗೆ ಉಳಿಕೆ ಸ್ಥಳದ ಬಗ್ಗೆ ವಿವರವಾದ ನಕ್ಷೆಯನ್ನು ತಯಾರಿಸಲು ಸೂಚನೆ ನೀಡಲಾಗಿತ್ತು. ಅದರಂತೆ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದಿಂದ ನಕ್ಷೆಯನ್ನು ತಯಾರಿಸಲಾಗಿರುತ್ತದೆ.

ಸದರಿ ನಕ್ಷೆಗೆ ಕಾರ್ಯಪಾಲಕ ಇಂಜಿನಿಯರ್, ಕಟ್ಟಡಗಳ ವಿಶೇಷ ವಿಭಾಗ, ಲೋಕೋಪಯೋಗಿ ಇಲಾಖೆ ಇವರು ಸಹಿ ಮಾಡಿರುತ್ತಾರೆ. ದಿನಾಂಕ 26–11–2012 ರಂದು ಕಾರ್ಯದರ್ಶಿಯವರು ಮುಖ್ಯ ಇಂಜಿನಿಯರ್‌ರೊಡನೆ ಸಭೆ ನಡೆಸಲಾಗಿದ್ದು, ಸದರಿ ಸಭೆಯಲ್ಲಿ ಕಾರ್ಯದರ್ಶಿಗಳು ಕೆಲವೊಂದು ಮಾರ್ಪಾಡನ್ನು ಮಾಡಿದ್ದು, ಈಗಿರುವ ನೀರಾವರಿ ಇಲಾಖೆಯಿಂದ ನಡೆಸಲಾಗುತ್ತಿರುವ ವರ್ಕ್‌ಶಾಪ್‌ನ್ನು ಸ್ಥಳಾಂತರಿಸಿ, ಆ ಸ್ಥಳವನ್ನು ಸಹಾ ಒಟ್ಟುಗೂಡಿಸಿದಲ್ಲಿ ಸುಮಾರು 4005 ಚ.ಮೀ. ನಷ್ಟು ಸ್ಥಳಾವಕಾಶವಾಗುತ್ತದೆ. ಅದರಲ್ಲಿ 18 ಮೀಟರ್‌ನಷ್ಟು ಅಗಲದ ರಸ್ತೆಯನ್ನು ಹಿಂಭಾಗದ ಸ್ಥಳಗಳಿಗೆ ಹೋಗಲು ಮೀಸಲಿಟ್ಟು ಉಳಿಕೆ ಸುಮಾರು 2955 ಚ.ಮೀ.ನಷ್ಟು ನಿವೇಶನವನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಹಸ್ತಾಂತರಿಸಿ, ಅದರಲ್ಲಿ ಒಂದು ಸಭಾಂಗಣವನ್ನು (500 ಜನರಿಗೆ) ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತ ಕಛೇರಿ, ಕೆಶಿಪ್ ಆಡಳಿತ ಕಛೇರಿ, ಎಸ್.ಹೆಚ್.ಡಿ.ಪಿ. ಆಡಳಿತ ಕಛೇರಿ ಹಾಗೂ ರಾಷ್ಟ್ರೀಯ ಹೆದ್ದಾರಿ ಕಛೇರಿಗಾಗಿ ಸ್ಥಳಾವಕಾಶ ಮಾಡಿಕೊಂಡು ಕಟ್ಟಡದ ನಕ್ಷೆ ತಯಾರಿಸಲು ಪ್ರಸ್ತಾವನೆ ಸಲ್ಲಿಸಲು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರಿಗೆ ಸೂಚನೆ ನೀಡಲಾಗಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ಮೇಲೆ ಓದಲಾದ (2)ರ ಪತ್ರದಲ್ಲಿ ರಾಜಾಜಿನಗರದ ಡಾ॥ ರಾಜ್‌ಕುಮಾರ್ ರಸ್ತೆ, ಒಂದನೇ ಬ್ಲಾಕ್‌ನಲ್ಲಿರುವ ಬಿ.ಇ.ಪಿ. ಆವರಣದ ನಿವೇಶನದ ಬಗ್ಗೆ ವಿವರವಾದ ವರದಿ ನೀಡಿರುತ್ತಾರೆ. ಸದರಿ ವರದಿಯಲ್ಲಿ ಬ್ಲಾಕ್ 3ರ ವಿಸ್ತೀರ್ಣವಾದ 2403.55 ಚ.ಮೀ. (23.76 ಗುಂಟೆ) ಎನ್ನ ಕೆಶಿಪ್ ಮತ್ತು ಕೆ.ಆರ್.ಡಿ.ಸಿ.ಎಲ್. ಕಛೇರಿಗಾಗಿ ನೀಡುವ ಕುರಿತು ಅಭಿಪ್ರಾಯ ಪಡಲಾಗಿದೆ. ಬಿ.ಇ.ಪಿ. ಆವರಣದಲ್ಲಿನ ಜಾಗವನ್ನು ಬ್ಲಾಕ್ 1,2,3,4 ಮತ್ತು 5 ಎಂದು ನಕ್ಷೆಯಲ್ಲಿ ನಮೂದಿಸಲಾಗಿದೆ. ಬ್ಲಾಕ್ 2 ರಲ್ಲಿನ 4180 ಚ.ಮೀ. ನಿವೇಶನವನ್ನು ಕೆ.ಸಿ.ಸಿ. ನಿಯಮಿತ ಇವರಿಗೆ 30 ವರ್ಷಗಳವರೆಗೆ ಗುತ್ತಿಗೆ ಆಧಾರದ ಮೇಲೆ ನೀಡಲಾಗಿದ್ದು, ನೀಡಲಾಗಿರುವ ಅವಧಿಯು ದಿನಾಂಕ 08–08–2014 ಕ್ಕೆ ಕೊನೆಗೊಳ್ಳುತ್ತದೆ ಎಂದು ತಿಳಿಸಲಾಗಿದೆ.

ಈ ಕುರಿತು ದಿನಾಂಕ 22-01-2013 ರಂದು ಕಾರ್ಯದರ್ಶಿಗಳು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು, ವ್ಯವಸ್ಥಾಪಕ ನಿರ್ದೇಶಕರು, ಕೆ.ಆರ್.ಡಿ.ಸಿ.ಎಲ್. ಬೆಂಗಳೂರು ಹಾಗೂ ಅಧೀಕ್ಷಕ ಇಂಜಿನಿಯರ್, ಬೆಂಗಳೂರು ವೃತ್ತ ಇವರನ್ನೊಳಗೊಂಡಂತೆ ಸಭೆ ನಡೆಸಲಾಗಿದ್ದು, ಸದರಿ ಸಭೆಯಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಡಾ॥ ರಾಜ್‌ಕುಮಾರ್ ರಸ್ತೆಯಲ್ಲಿರುವ ಲೋಕೋಪಯೋಗಿ ಇಲಾಖೆಗೆ ಸೇರಿದ ಬಿ.ಇ.ಪಿ. ಆವರಣದಲ್ಲಿನ ಜಮೀನಿನಲ್ಲಿ ನಕ್ಷೆಯಲ್ಲಿರುವಂತೆ 2955.00 ಚ.ಮೀ. ಜಾಗವನ್ನು ಕೆಲವು ಷರತ್ತುಗಳೊಂದಿಗೆ ಗುತ್ತಿಗೆ ಆಧಾರದ ಮೇಲೆ ನೀಡಲು ನಿರ್ಧರಿಸಲಾಗಿದೆ. ಸದರಿ ನಿರ್ಧಾರದಂತೆ ವ್ಯವಸ್ಥಾಪಕ ನಿರ್ದೇಶಕರು, ಕೆ.ಆರ್.ಡಿ.ಸಿ.ಎಲ್. ಇವರು ತಮ್ಮ ದಿನಾಂಕ 01-03-2013ರ ಪತ್ರದಲ್ಲಿ ಡಾ॥ ರಾಜ್‌ಕುಮಾರ್ ರಸ್ತೆಯಲ್ಲಿರುವ ಲೋಕೋಪಯೋಗಿ ಇಲಾಖೆಗೆ ಸೇರಿದ ಜಮೀನಿನಲ್ಲಿ ಒಟ್ಟು 2955 ಚ.ಮೀ. ವಿಸ್ತೀರ್ಣದಲ್ಲಿ ಸಂಸ್ಥೆಯ ಆಡಳಿತ ಕಛೇರಿಯ ಕಟ್ಟಡ ಕಟ್ಟಲು ಹಾಗೂ ಲೋಕೋಪಯೋಗಿ ಇಲಾಖೆಯ ಇತರೆ ಅಂಗ ಸಂಸ್ಥೆಗಳಿಗೆ ಕಛೇರಿ ಕಟ್ಟಡಗಳನ್ನು ನಿರ್ಮಿಸಲು ಉದ್ದೇಶಿಸಲಾಗಿದ್ದು, ವಿವರಗಳು ಈ ಕೆಳಕಂಡಂತೆ ಇರುತ್ತವೆ ಎಂದು ತಿಳಿಸುತ್ತಾ, ವಲಯ ನಿಯಮಾವಳಿಗಳ ಪ್ರಕಾರ ಕಟ್ಟಡ ಕಟ್ಟಲು ನಿವೇಶನವನ್ನು ಹಸ್ತಾಂತರಿಸಲು ಕೋರಿರುತ್ತಾರೆ.

| | | |
|---|---|---|
| 1 | ಕರಅನಿ ನಿಯಮಿತಕ್ಕೆ ಹಸ್ತಾಂತರವಾಗಲಿರುವ ನಿವೇಶನದ ಒಟ್ಟು ವಿಸ್ತೀರ್ಣ | 2955 ಚ.ಮೀ. |
| 2 | ಅವಕಾಶವಿರುವ ಮಹಡಿ ಪ್ರದೇಶದ ಅನುಪಾತ (FAR) | 2.25 |
| 3 | ಅನುಪಾತದ ಪ್ರಕಾರ ಒಟ್ಟು ಕಟ್ಟಬಹುದಾದ ಕಟ್ಟಡದ ವಿಸ್ತೀರ್ಣ | 2.25x2955.00-664 9 ಚ.ಮೀ. |
| 4 | ಒಟ್ಟು ಕಟ್ಟುವ ಕಟ್ಟಡದ ಎತ್ತರ | 24 ಮೀ. |
| 5 | ಒಟ್ಟು ಅಂತಸ್ತಿನ ಕಟ್ಟಡ | 5 ಅಂತಸ್ತು |
| 6 | ಪ್ರತಿಯೊಂದು ಅಂತಸ್ತಿನ ವಿಸ್ತೀರ್ಣ | 1329.55 ಚ.ಮೀ. |
| 7 | ವಾಹನಗಳ ಪಾರ್ಕಿಂಗ್ ವ್ಯವಸ್ಥೆ | ಕಟ್ಟಡದ ವಿಸ್ತೀರ್ಣಕ್ಕೆ ತಕ್ಕಂತೆ ನೆಲಮಹಡಿಗಳಲ್ಲಿ ಬಿ.ಬಿ.ಎಂ.ಪಿ. ಬೈಲಾ ಪ್ರಕಾರ ನಿರ್ಮಿಸಲಾಗುವುದು |

ಪ್ರಸ್ತಾವನೆಯಲ್ಲಿರುವ ಅಂಶಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಲೋಇ 563 ಬಿಎಂಎಸ್ 2012, ಬೆಂಗಳೂರು, ದಿನಾಂಕ : 03ನೇ ಏಪ್ರಿಲ್ 2013**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ರಾಜಾಜಿನಗರದ ಡಾ॥ ರಾಜ್‌ಕುಮಾರ್ ರಸ್ತೆಯಲ್ಲಿರುವ ಮೊದಲನೇ ಬ್ಲಾಕ್ ಸರ್ವೆ ನಂ.8 ರಲ್ಲಿ ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಯಲ್ಲಿರುವ ಬಿ.ಇ.ಪಿ. ಆವರಣದಲ್ಲಿನ ನಕ್ಷೆಯಲ್ಲಿರುವಂತೆ 2955 ಚ.ಮಿ. ವಿಸ್ತೀರ್ಣದ ನಿವೇಶನವನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತಕ್ಕೆ ಕಛೇರಿಗಳ ಸಂಕೀರ್ಣವನ್ನು ನಿರ್ಮಿಸಲು 30 ವರ್ಷಗಳ ಅವಧಿಗೆ ವಾರ್ಷಿಕ ಪ್ರತಿ ಚ.ಮೀಟರ್‌ಗೆ ರೂ. 500.00 ರಂತೆ ಅಂದರೆ ಒಟ್ಟು ರೂ. 14,77,500.00 ಗಳಿಗೆ ಗುತ್ತಿಗೆ ನಿಗದಿಪಡಿಸಿ, ಈ ಕೆಳಕಂಡ ಷರತ್ತುಗಳನ್ವಯ ಗುತ್ತಿಗೆ ಆಧಾರದ ಮೇಲೆ ನೀಡಲು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರಿಗೆ ಆದೇಶಿಸಲಾಗಿದೆ.

1. ಸದರಿ ಕಟ್ಟಡದ ಒಟ್ಟು ವಿಸ್ತೀರ್ಣದಲ್ಲಿ ಲೋಕೋಪಯೋಗಿ ಇಲಾಖೆಗಳ ಕಛೇರಿಗಳ ಸಲುವಾಗಿ 30% (built up area) ಪ್ರತಿಶತ ಉಚಿತವಾಗಿ ಇಲಾಖೆಗೆ ನೀಡುವುದು.
2. ನಿವೇಶನವನ್ನು ಯಾವ ಉದ್ದೇಶಕ್ಕಾಗಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಉಪಯೋಗಿಸುವುದು.
3. ಮುಖ್ಯ ವಾಸ್ತುಶಿಲ್ಪಿಯಿಂದ ಕಟ್ಟಡದ ನಕಾಶೆಯನ್ನು ಅನುಮೋದನೆ ಪಡೆಯುವುದು.
4. ಗುತ್ತಿಗೆ ಆಧಾರದ ಮೇಲೆ ನೀಡಿದ ನಿವೇಶನವನ್ನು ಮಾರಾಟ/ಉಪ ಗುತ್ತಿಗೆ/ ಅಡವು ಮಾಡಬಾರದು.
5. ಗುತ್ತಿಗೆ ಆಧಾರದ ಮೇಲೆ ನೀಡುತ್ತಿರುವ ನಿವೇಶನವನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತವು ಮೇಲ್ವಿಚಾರಣೆ ಮಾಡುವುದು.
6. ಯಾವುದೇ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಸರ್ಕಾರವು ಗುತ್ತಿಗೆ ಆಧಾರದ ಮೇಲೆ ನೀಡಿರುವ ನಿವೇಶನವನ್ನು ಮರಳಿ ಪಡೆಯುವ ಹಕ್ಕನ್ನು ಹೊಂದಿರುತ್ತದೆ.
7. ಸರ್ಕಾರವು 30 ವರ್ಷಗಳ ನಂತರ ಗುತ್ತಿಗೆ ಅವಧಿ ಮುಂದುವರೆಸುವ ಹಕ್ಕನ್ನು ಹೊಂದಿರುತ್ತದೆ.

ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ), ಬೆಂಗಳೂರು ಇವರು ನಿಯಮಾನುಸಾರ ಗುತ್ತಿಗೆ ಕರಾರು ಮಾಡಿಕೊಂಡು ಸಕ್ಷಮ ಪ್ರಾಧಿಕಾರದ ಅನುಮೋದನೆ ಪಡೆದು ನಿವೇಶನವನ್ನು ಹಸ್ತಾಂತರಿಸಲು ಕ್ರಮ ಕೈಗೊಳ್ಳುವುದು.

ನಿವೇಶನದ ಚಕ್ಕುಬಂದಿ :

1. ಪೂರ್ವಕ್ಕೆ – ಡಾ॥ ರಾಜ್‌ಕುಮಾರ್ ರಸ್ತೆ
2. ಪಶ್ಚಿಮಕ್ಕೆ – ಬಿಇಪಿ ಆವರಣ
3. ಉತ್ತರಕ್ಕೆ – ಖಾಸಗಿ ನಿವೇಶನ
4. ದಕ್ಷಿಣಕ್ಕೆ – 23.00 ಮೀ. ರಸ್ತೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಂ. ವೀರಯ್ಯ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ (ಕಟ್ಟಡಗಳು)

P.R. 513

## ಕಂದಾಯ ಸಚಿವಾಲಯ

**ವಿಷಯ:** ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿ, ಇಗ್ಗಲೂರು ಗ್ರಾಮದ ಸ.ನಂ. 263/1 ರಲ್ಲಿ 0.19 ಗುಂಟೆ ಬಿ–ಖರಾಬು ಜಮೀನನ್ನು ಶ್ರೀ ಕನಕ ಸೇವಾ ಚಾರಿಟಬಲ್ ಟ್ರಸ್ಟ್ ರವರಿಗೆ ಮಂಜೂರು ಮಾಡುವ ಕುರಿತು.

**ಓದಲಾಗಿದೆ:**
1. ಪತ್ರ ಸಂಖ್ಯೆ : ಎಲ್ಎನ್ಡಿ (ಎ): ಸಿಆರ್34/2011–12, ದಿನಾಂಕ 03–01–2012.
2. ಸರ್ಕಾರದ ಪತ್ರ ಸಂಖ್ಯೆ : ಆರ್‌ಡಿ 65 ಎಲ್‌ಜಿಬಿ 2012, ದಿನಾಂಕ 29–03–2012.
3. ಪತ್ರ ಸಂಖ್ಯೆ : ಎಲ್ಎನ್ಡಿ (ಎ): ಸಿಆರ್34/2011–12, ದಿನಾಂಕ 23–07–2012.
4. ಸರ್ಕಾರದ ಅಧಿಸೂಚನೆ ಸಂಖ್ಯೆ : ಆರ್‌ಡಿ 485 ಎಲ್‌ಜಿಬಿ 2012, ದಿನಾಂಕ 17–08–2012.
5. ಪತ್ರ ಸಂಖ್ಯೆ : ಎಲ್ಎನ್ಡಿ (ಎ): ಸಿಆರ್34/2011–12, ದಿನಾಂಕ 25–09–2012.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿ, ಇಗ್ಗಲೂರು ಗ್ರಾಮದ ಸ.ನಂ. 263/1 ರಲ್ಲಿ 0.19 ಗುಂಟೆ ಬಿ–ಖರಾಬು ಜಮೀನನ್ನು ಶ್ರೀ ಕನಕ ಸೇವಾ ಚಾರಿಟಬಲ್ ಟ್ರಸ್ಟ್ ಇವರು ಸಂಸ್ಥೆಯ ಚಟುವಟಿಕೆಗಳನ್ನು ಅಭಿವೃದ್ಧಿ ಪಡಿಸಲು ಹಾಗೂ ಕನಕಭವನ ಸ್ಥಾಪಿಸುವುದಕ್ಕಾಗಿ ಮಂಜೂರು ಮಾಡುವಂತೆ ಕೋರಿದ್ದು, ಸದರಿ ಜಮೀನು ಕುಂಟೆ ಎಂದು ವರ್ಗೀಕರಣವಾಗಿದ್ದು, ಕುಂಟೆಯ ಗುಣಲಕ್ಷಣಗಳನ್ನು ಕಳೆದುಕೊಂಡಿರುವುದರಿಂದ, ಸದರಿ ಜಮೀನಿನ ಮೇಲೆ ಸಾರ್ವಜನಿಕ ಹಕ್ಕನ್ನು ವಿಹಿತಗೊಳಿಸಲು ಜಿಲ್ಲಾಧಿಕಾರಿ, ಬೆಂಗಳೂರು ಇವರು ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸದರಿ ಬಿ–ಖರಾಬು ಜಮೀನನ್ನು ಕರ್ನಾಟಕ ಭೂಕಂದಾಯ ಕಾಯ್ದೆ ಕಲಂ 68(1) ರ ಅಡಿಯಲ್ಲಿ ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲು ಸಾರ್ವಜನಿಕ ಪ್ರಕಟಣೆ ಹೊರಡಿಸಲು ಸರ್ಕಾರದ ಪೂರ್ವಾನುಮೋದನೆ ನೀಡಲಾಗಿದೆ. ಅದರಂತೆ ದಿನಾಂಕ 12.04.2012ರ ರಾಜ್ಯಪತ್ರದಲ್ಲಿ ಪ್ರಕಟಣೆ ಹೊರಡಿಸಲಾಗಿರುತ್ತದೆ.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಸದರಿ ಪ್ರಕಟಣೆಗೆ ಯಾವುದೇ ಆಕ್ಷೇಪಣೆಗಳು ಬಂದಿರುವುದಿಲ್ಲ ಎಂದು ಜಿಲ್ಲಾಧಿಕಾರಿಗಳು ತಿಳಿಸಿದ್ದರಿಂದ ಮೇಲೆ ಓದಲಾದ (4)ರಲ್ಲಿ ಸದರಿ ಜಮೀನನ್ನು ಸಾರ್ವಜನಿಕ ಹಕ್ಕಿನಿಂದ ವಿಹಿತಗೊಳಿಸಲು ಕರ್ನಾಟಕ ಭೂಕಂದಾಯ ಅಧಿನಿಯಮ 1964ರ ಕಲಂ 68(5) ರಡಿ ಪ್ರಕಟಣೆ ಹೊರಡಿಸಿದ್ದು, ದಿನಾಂಕ 30–8–2012ರ ರಾಜ್ಯಪತ್ರದಲ್ಲಿ ಪ್ರಕಟಣೆಗೊಂಡಿರುತ್ತದೆ. ಶ್ರೀ ಕನಕ ಸೇವಾ ಚಾರಿಟಬಲ್ ಟ್ರಸ್ಟ್ ಇವರು ಸದರಿ ಖರಾಬು ಜಮೀನನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.

ಮೇಲೆ (5)ರಲ್ಲಿ ಓದಲಾದ ಪತ್ರದಲ್ಲಿ ಸದರಿ ಜಮೀನಿನ ಮಾರ್ಗಸೂಚಿ ದರ ಎಕರೆಯೊಂದಕ್ಕೆ ರೂ. 65 ಲಕ್ಷಗಳಾಗಿದ್ದು, ಮಾರುಕಟ್ಟೆ ದರ ರೂ.85 ಲಕ್ಷಗಳಾಗಿರುತ್ತದೆಂದು ಜಿಲ್ಲಾಧಿಕಾರಿ, ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

ಮೇಲ್ಕಂಡ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಆರ್‌ಡಿ 485 ಎಲ್‌ಜಿಬಿ 2012, ಬೆಂಗಳೂರು, ದಿನಾಂಕ : 21ನೇ ಫೆಬ್ರವರಿ 2013**

ಆನೇಕಲ್ ತಾಲ್ಲೂಕು, ಅತ್ತಿಬೆಲೆ ಹೋಬಳಿ, ಇಗ್ಗಲೂರು ಗ್ರಾಮದ ಸ.ನಂ. 263/1 ರಲ್ಲಿ 0.19 ಗುಂಟೆ ಬಿ–ಖರಾಬು ಜಮೀನನ್ನು ಪ್ರಸಕ್ತ ಮಾರುಕಟ್ಟೆ ಬೆಲೆ ಎಕರೆ ಒಂದಕ್ಕೆ ರೂ.85.00 ಲಕ್ಷಗಳಂತೆ ದರವನ್ನು ವಿಧಿಸಿ, ನಿಯಮಾನುಸಾರ ಇತರೆ ಶುಲ್ಕಗಳನ್ನು ಪಾವತಿಸುವಂತೆ ಹಾಗೂ ಈ ಕೆಳಗೆ ನಮೂದಿಸಿರುವ ನಿಬಂಧನೆಗಳಿಗೊಳಪಟ್ಟು ಶ್ರೀ ಕನಕ ಸೇವಾ ಚಾರಿಟಬಲ್ ಟ್ರಸ್ಟ್ ಇವರಿಗೆ ಮಂಜೂರು ಮಾಡಿದೆ.

**ಷರತ್ತುಗಳು :–**

1. ಮಂಜೂರಾದ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಅವಧಿಯೊಳಗೆ ಉಪಯೋಗಿಸತಕ್ಕದ್ದು.
2. ಮಂಜೂರಾದ ಭೂಮಿಯನ್ನು ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಬಳಸತಕ್ಕದ್ದಲ್ಲ.
3. ಮಂಜೂರಾದ ಜಮೀನಿನಲ್ಲಿ ಯಾವುದೇ ರೀತಿಯ ಅತಿಕ್ರಮಣವಾಗದಂತೆ ಕ್ರಮವಹಿಸತಕ್ಕದ್ದು.
4. ಮಂಜೂರು ಮಾಡಲ್ಪಡುವ ಜಮೀನಿನ ಮೇಲೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
5. ಮಂಜೂರಾದ ಜಮೀನನ್ನು ಕಂದಾಯ ಇಲಾಖೆಯ ಅನುಮತಿ ಇಲ್ಲದೆ ಮಾರಾಟ ಮಾಡುವುದಾಗಲೀ, ಗುತ್ತಿಗೆ/ಉಪ ಗುತ್ತಿಗೆಗೆ ನೀಡುವುದಾಗಲೀ, ಅಡಮಾನ, ವರ್ಗಾವಣೆ, ದಾನ, ಇತರೆ ಯಾವುದೇ ರೀತಿಯ ಪರಭಾರೆಯನ್ನು ಮಾಡಬಾರದು.
6. ಮಂಜೂರಾದ ಜಮೀನಿನ ಯಾವುದೇ ಭಾಗವು ಸಾರ್ವಜನಿಕ ಉದ್ದೇಶಕ್ಕೆ ಅಗತ್ಯವಾಗಿದ್ದಲ್ಲಿ, ಸರ್ಕಾರವು ಸದರಿ ಜಮೀನನ್ನು ಪರಿಹಾರ ನೀಡದೇ ಹಿಂತೆಗೆದುಕೊಳ್ಳುವ ಹಕ್ಕನ್ನು ಹೊಂದಿರುತ್ತದೆ.
7. ಮಂಜೂರಾದ ಜಮೀನು ಸಂಸ್ಥೆಗೆ ಅವಶ್ಯವಿಲ್ಲವೆಂದು ಕಂಡುಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
8. ಮಂಜೂರಾದ ಜಮೀನಿನಲ್ಲಿ ಅಭಿವೃದ್ಧಿ ಕಾರ್ಯಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಶಾಸನಬದ್ಧವಾಗಿ ಪಡೆಯಬೇಕಾದ ಪರವಾನಗಿಗಳನ್ನು ಸಂಬಂಧಿತ ಪ್ರಾಧಿಕಾರಗಳಿಂದ ಪಡೆಯತಕ್ಕದ್ದು ಹಾಗೂ ನಿಯಮಾನುಸಾರ ಪಾವತಿಸಬೇಕಾದ ಎಲ್ಲಾ ರೀತಿಯ ಶುಲ್ಕಗಳನ್ನು ಕಡ್ಡಾಯವಾಗಿ ಪಾವತಿಸತಕ್ಕದ್ದು.

9. ಮಂಜೂರಾದ ಜಮೀನು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿದ್ದು, ಸದರಿ ನಿಯಮಗಳ ಉಲ್ಲಂಘನೆಯಾದಲ್ಲಿ ಈ ಮಂಜೂರಾತಿ ಆದೇಶ ತನ್ನಷ್ಟಕ್ಕೆ ತಾನೇ ರದ್ದಾಗುವುದು ಹಾಗೂ ಯಾವುದೇ ಪರಿಹಾರ ನೀಡದೇ ಮಂಜೂರಾದ ಜಮೀನನ್ನು ಸರ್ಕಾರದ ವಶಕ್ಕೆ ಪಡೆಯಲಾಗುವುದು.

10. ಜಿಲ್ಲಾಧಿಕಾರಿಗಳು ಮಂಜೂರಾದ ಜಮೀನನ್ನು ಫಲಾನುಭವಿಗಳಿಗೆ ಹಸ್ತಾಂತರಿಸುವಾಗ ಮಂಜೂರಾದ ಪ್ರದೇಶದ ವಾಸ್ತವ ಪರಿಸ್ಥಿತಿಗಳನ್ನು ಗಮನದಲ್ಲಿಟ್ಟುಕೊಂಡು ಪೂರಕವಾದ ಷರತ್ತುಗಳನ್ನು ವಿಧಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಉಮಾದೇವಿ,**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ.ಮಂ.)

P.R. 516

SC - 100

## ಆರ್ಥಿಕ ಸಚಿವಾಲಯ

**ವಿಷಯ :** ಕರ್ನಾಟಕ ರಾಜ್ಯ ಸರ್ಕಾರಿ ನೌಕರರಿಗೆ ಭಾರತದಲ್ಲಿನ ಯಾವುದೇ ಸ್ಥಳಕ್ಕೆ ಮಾಡುವ ಪ್ರಯಾಣಕ್ಕೆ ರಜಾ ಪ್ರಯಾಣ ರಿಯಾಯಿತಿ ಸೌಲಭ್ಯ ಮಂಜೂರಾತಿ–ನಿಯಮದ ಸಡಿಲಿಕೆ ಬಗ್ಗೆ.

**ಪ್ರಸ್ತಾವನೆ :**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 550(4)ರ ಪ್ರಕಾರ ರಾಜ್ಯ ಸರ್ಕಾರಿ ನೌಕರರು ಭಾರತದಲ್ಲಿನ ಯಾವುದೇ ಸ್ಥಳಕ್ಕೆ ಮಾಡುವ ಪ್ರಯಾಣಕ್ಕೆ ರಜಾ ಪ್ರಯಾಣ ರಿಯಾಯಿತಿ ಸೌಲಭ್ಯವನ್ನು ಹದಿನೈದು ದಿನಗಳಿಗಿಂತ ಕಡಿಮೆಯಲ್ಲದ ಗಳಿಕೆ ರಜೆ, ಅರ್ಧ ವೇತನ ರಜೆ, ಪರಿವರ್ತಿತ ರಜೆಯ ಅವಧಿಯಲ್ಲಿ ಮತ್ತು ವೆಕೇಶನ್ ಅವಧಿಯಲ್ಲಿ ಅನುಮತಿಸತಕ್ಕದಾಗಿರುತ್ತದೆ. ಕೇಂದ್ರ ಸರ್ಕಾರದ ರಜಾ ಪ್ರಯಾಣ ರಿಯಾಯಿತಿ ನಿಯಮಗಳು, 1988ರ ನಿಯಮ 7(2) ರಲ್ಲಿರುವಂತೆಯೇ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 550(4)ರಲ್ಲಿನ ಕನಿಷ್ಠ 15 ದಿನಗಳ ಗಳಿಕೆ ರಜೆ/ಅರ್ಧವೇತನ ರಜೆ, ಪರಿವರ್ತಿತ ರಜೆ ಮತ್ತು ವೆಕೇಶನ್ ಅವಧಿಯಲ್ಲಿ ಪಡೆಯಬೇಕೆಂಬ ಷರತ್ತನ್ನು ಕೈಬಿಟ್ಟು, ರಜಾ ಪ್ರಯಾಣ ರಿಯಾಯಿತಿ ಸೌಲಭ್ಯವನ್ನು ಸಾಂದರ್ಭಿಕ ರಜೆ ಮತ್ತು ವಿಶೇಷ ಸಾಂದರ್ಭಿಕ ರಜೆಯೂ ಒಳಗೊಂಡಂತೆ ಯಾವುದೇ ರಜೆಯ ಅವಧಿಯಲ್ಲಿ ಪಡೆಯಲು ಅವಕಾಶ ಕಲ್ಪಿಸುವಂತೆ ಕೋರಿ ಅಧ್ಯಕ್ಷರು ಕರ್ನಾಟಕ ರಾಜ್ಯ ಸರ್ಕಾರಿ ನೌಕರರ ಸಂಘ, ಕಬ್ಬನ್ ಉದ್ಯಾನವನ, ಬೆಂಗಳೂರು ಇವರು ದಿನಾಂಕ : 16–1–2013 ರಂದು ಸರ್ಕಾರಕ್ಕೆ ಮಾಡಿರುವ ಮನವಿಯ ಹಿನ್ನೆಲೆಯಲ್ಲಿ ಸರ್ಕಾರವು ಈ ವಿಷಯವನ್ನು ಪರಿಶೀಲಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಆಇ 3 ಸೇನಿಸೇ 2013, ದಿನಾಂಕ : 8–4–2013**

ಕರ್ನಾಟಕ ನಾಗರೀಕ ಸೇವಾ ನಿಯಮಗಳ ನಿಯಮ 550ರನ್ವಯ ಭಾರತದಲ್ಲಿನ ಯಾವುದೇ ಸ್ಥಳಕ್ಕೆ ಮಾಡುವ ಪ್ರಯಾಣಕ್ಕೆ ರಾಜ್ಯ ಸರ್ಕಾರಿ ನೌಕರರು ಪಡೆಯುವ ರಜಾ ಪ್ರಯಾಣ ರಿಯಾಯಿತಿ ಸೌಲಭ್ಯಕ್ಕಾಗಿ **"**ಕನಿಷ್ಠ 15 ದಿನಗಳಿಗೆ ಕಡಿಮೆಯಲ್ಲದ ಗಳಿಕೆ ರಜೆ, ಅರ್ಧ ವೇತನ ರಜೆ, ಪರಿವರ್ತಿತ ರಜೆ ಮತ್ತು ವೆಕೇಷನ್ ಅವಧಿ**"** ಎಂಬ ನಿರ್ಬಂಧವನ್ನು ಸಡಿಲಿಸಿ, ಈ ರಿಯಾಯಿತಿ ಸೌಲಭ್ಯವನ್ನು ಸಾಂದರ್ಭಿಕ ರಜೆ ಮತ್ತು ವಿಶೇಷ ಸಾಂದರ್ಭಿಕ ರಜೆಯೂ ಒಳಗೊಂಡಂತೆ ಯಾವುದೇ ರಜೆಯ ಅವಧಿಯಲ್ಲಿ ಅನುಮತಿಸತಕ್ಕದೆಂದು ಸರ್ಕಾರವು ಈ ಮೂಲಕ ಆದೇಶಿಸಿದೆ. ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 550(4)ಕ್ಕೆ ಸೂಕ್ತ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಪರಿಗಣಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಆಲಿಸ್ ಗೊನ್ಸಾಲ್ವಿಸ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–1).

P.R. 528

SC - 100

## ಇಂಧನ ಸಚಿವಾಲಯ

**ವಿಷಯ :** 2013–14ನೇ ಸಾಲಿನಲ್ಲಿ ಇಂಧನ ಇಲಾಖೆಯ ಯೋಜನಾ ಕಾರ್ಯಕ್ರಮಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ :** 2013–14 ನೇ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಯೋಜನಾ ಕಾರ್ಯಕ್ರಮಗಳು.

**ಪ್ರಸ್ತಾವನೆ :**

1. 2013–14 ನೇ ಸಾಲಿನ ಆಯವ್ಯಯದಲ್ಲಿ ಈ ಕೆಳಕಂಡ ಯೋಜನಾ ಕಾರ್ಯಕ್ರಮಗಳಿಗೆ 2013–14ನೇ ಸಾಲಿಗೆ ಬಂಡವಾಳ/ಸಾಲ ಒದಗಿಸಲಾಗಿದೆ.

| ಕ್ರಮ ಸಂಖ್ಯೆ | ಯೋಜನಾ ಕಾರ್ಯಕ್ರಮಗಳ ಲೆಕ್ಕಶೀರ್ಷಿಕೆ | ಆಯವ್ಯಯದಲ್ಲಿ ಒದಗಿಸಲಾಗಿರುವ ಮೊಬಲಗು ರೂ. ಕೋಟಿಗಳಲ್ಲಿ |
|---|---|---|
| 1. | Investment in Power Utilities/ ವಿದ್ಯುಚ್ಛಕ್ತಿ ವಲಯದ ಸಂಸ್ಥೆಗಳಲ್ಲಿ ಹೂಡಿಕೆ | 700.00 |
| 2. | Investment in ESCOMs for Niranthara Jyothi (Special Development Plan)<br>ನಿರಂತರ ಜ್ಯೋತಿ ಕಾಮಗಾರಿಗಳಿಗಾಗಿ ಎಸ್ಕಾಂನಲ್ಲಿ ಹೂಡಿಕೆ/(ವಿಶೇಷ ಅಭಿವೃದ್ಧಿ ಯೋಜನೆ) | 41.26 |
| 3. | Special Component Plan (SCP)/ ವಿಶೇಷ ಘಟಕ ಯೋಜನೆ | 47.19 |
| 4. | Tribal Sub Plan (TSP)/ ಗಿರಿಜನ ಉಪಯೋಜನೆ | 11.55 |

| ಕ್ರಮ ಸಂಖ್ಯೆ | ಯೋಜನಾ ಕಾರ್ಯಕ್ರಮಗಳ ಲೆಕ್ಕಶೀರ್ಷಿಕೆ | ಆಯವ್ಯಯದಲ್ಲಿ ಒದಗಿಸಲಾಗಿರುವ ಮೊಬಲಗು ರೂ. ಕೋಟಿಗಳಲ್ಲಿ |
|---|---|---|
| 5. | Bangalore Distribution Upgradation (JBIC) BESCOM-EAP Loans ಬೆಂಗಳೂರು ಹಂಚಿಕೆ ಉನ್ನತೀಕರಣ (ಜೆಬಿಐಸಿ)–ಬೆವಿಕಂ–ಇಎಪಿ | 145.91 |
| 6. | BelakuYojana/ ಬೆಳಕು ಯೋಜನಾ | 10.00 |
| 7. | Roof Top Solar Project/ ಮೇಲ್ಛಾವಣಿ ಸೌರಶಕ್ತಿ ಯೋಜನೆ | 10.00 |
| | **ಮೊತ್ತ** | **965.91** |

2. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯ ವ್ಯಾಪ್ತಿಯಲ್ಲಿ ಕಾರ್ಯಾನುಷ್ಠಾನಗೊಳ್ಳುತ್ತಿರುವ ಬೆಂಗಳೂರು ವಿತರಣಾ ಉನ್ನತೀಕರಣ ಯೋಜನೆಗೆ JICA ಸಂಸ್ಥೆಯು ಸಾಲದ ರೂಪದಲ್ಲಿ ಬಂಡವಾಳ ಒದಗಿಸುತ್ತಿದ್ದು, ಈ ಹಣದ ಬಿಡುಗಡೆಗಾಗಿ ರಾಜ್ಯದ ಆಯವ್ಯಯದಲ್ಲಿ ರೂ. 145.91 ಕೋಟಿಗಳಷ್ಟು ಹಣ ತೆಗೆದಿರಿಸಿದೆ.
3. ಬಂಡವಾಳ ಹೂಡಿಕೆಗಾಗಿ (Investment in Power Utilities) ಆಯವ್ಯಯದಲ್ಲಿ ಒದಗಿಸಿರುವ ರೂ. 700 ಕೋಟಿಗಳನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಹಾಗೂ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಲ್ಲಿ ಬಂಡವಾಳ ಕಾಮಗಾರಿಗಳಿಗೆ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳಿಗೆ ಅನಧಿಕೃತ ನೀರಾವರಿ ಪಂಪ್‌ಸೆಟ್‌ಗಳ ಸಕ್ರಮೀಕರಣಕ್ಕಾಗಿ ಮತ್ತು ಆಯವ್ಯಯದ ಭಾಷಣದಲ್ಲಿ ಸೂಚಿಸಿರುವ ಇತರೇ ಬಂಡವಾಳ ಕಾಮಗಾರಿಗಳಿಗೆ ಉಪಯೋಗಿಸಲಾಗುವುದು.
4. 2013–14ರಲ್ಲಿ ಕಾರ್ಯಪ್ರಗತಿಯಲ್ಲಿರುವ ಯೋಜನೆಗಳನ್ನು ಮುಂದುವರೆಸಿ ಕಾರ್ಯಾನುಷ್ಠಾನಗೊಳಿಸಲು ಪ್ರಸ್ತುತ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 2 ಪಿಎಸ್‌ಆರ್ 2013, ಬೆಂಗಳೂರು, ದಿನಾಂಕ : 12–4–2013**

1. ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರವು 2013–14ನೇ ಸಾಲಿನಲ್ಲಿ ಈ ಕೆಳಕಂಡ ಕಾರ್ಯಾನುಷ್ಠಾನವಾಗುತ್ತಿರುವ ಯೋಜನಾ ಕಾರ್ಯಕ್ರಮಗಳನ್ನು ಮುಂದುವರಿಸಿ ಅನುಷ್ಠಾನಗೊಳಿಸಲು ಅನುಮೋದನೆ ನೀಡಿದೆ.

| ಕ್ರಮ ಸಂಖ್ಯೆ | ಯೋಜನಾ ಕಾರ್ಯಕ್ರಮಗಳ ಲೆಕ್ಕಶೀರ್ಷಿಕೆ | ಆಯವ್ಯಯದಲ್ಲಿ ಒದಗಿಸಲಾಗಿರುವ ಮೊಬಲಗು ರೂ. ಕೋಟಿಗಳಲ್ಲಿ |
|---|---|---|
| 1. | Investment in Power Utility ಬಳಕೆಯಲ್ಲಿ ಹೂಡಿಕೆ 4801–01–190–0–09–211 (Plan) | 700.00 |
| 2. | Investment in ESCOMs for Niranthara Jyothi (Special Development Plan) ನಿರಂತರ ಜ್ಯೋತಿ ಕಾಮಗಾರಿಗಳಿಗಾಗಿ ಎಸ್ಕಾಂನಲ್ಲಿ ಹೂಡಿಕೆ/(ವಿಶೇಷ ಅಭಿವೃದ್ಧಿ ಯೋಜನೆ) 4801–80–190–0–02–133 | 41.26 |
| 3. | Investment in ESCOMs for Special Component Plan (SCP)/ ವಿಶೇಷ ಘಟಕ ಯೋಜನೆ 4801–80–190–0–02–422 | 47.19 |
| 4. | Investment in ESCOMs for Tribal Sub Plan (TSP)/ಗಿರಿಜನ ಉಪಯೋಜನೆ 4801–80–190–0–02–423 | 11.55 |
| 5. | Investment in ESCOMs for Bangalore Distribution Upgradation (JBIC) BESCOM-EAP Loans ಬೆಂಗಳೂರು ಹಂಚಿಕೆ ಉನ್ನತೀಕರಣ (ಜೆಬಿಐಸಿ)–ಬೆವಿಕಂ–ಇಎಪಿ 6801–00–205–1–80–394 | 145.91 |
| 6. | BelakuYojana/ ಬೆಳಕು ಯೋಜನಾ 2801–80–800–1–05–103– GIA-Asset Creation | 10.00 |
| 7. | Roof Top Solar Project/ಮೇಲ್ಛಾವಣಿ ಸೌರಶಕ್ತಿ ಯೋಜನೆ 2801–80–800–1–06–102 GIA-Asset Creation | 10.00 |
| | **ಮೊತ್ತ** | **965.91** |

2. 2013–14ನೇ ಸಾಲಿಗೆ ಆಯವ್ಯಯದಲ್ಲಿ ಬಂಡವಾಳದ ಕಾರ್ಯಕ್ರಮಗಳಿಗೆ ಒದಗಿಸಿರುವ ಹಣವನ್ನು ಸೂಕ್ತ ಪ್ರಸ್ತಾವನೆಯೊಂದಿಗೆ ಉಪಯೋಗಿಸಲು ಆರ್ಥಿಕ ಇಲಾಖೆಯ ಸಹಮತಿ ಕೋರಲಾಗುವುದು.
3. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ : 10–7–1996 ರನ್ವಯ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಎ. ಚಪ್ಪರಬಂದ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

P.R. 519

**ಆರ್ಥಿಕ ಸಚಿವಾಲಯ**

**ವಿಷಯ :** ಶ್ರೀ ಡಿ.ವೈ. ತಳವಾರ್, ಲೆಕ್ಕಾಧೀಕ್ಷಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವಿರುದ್ಧ ಇಲಾಖಾ ವಿಚಾರಣೆ–ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಕೃತೋಇ 106 ತೋಸೇಪ 2004, ದಿನಾಂಕ : 10–8–2006
2. ವಿಚಾರಣಾಧಿಕಾರಿಗಳ ವರದಿ ದಿನಾಂಕ : 6–11–2009.
3. ಪತ್ರದ ಸಂಖ್ಯೆ : ಕೃತೋಇ 106 ತೋಸೇಪ 2004, ದಿನಾಂಕ : 4–4–2010.
4. ಶ್ರೀ ಡಿ.ವೈ. ತಳವಾರ್, ಲೆಕ್ಕಾಧೀಕ್ಷಕರ ಉತ್ತ್ರ ದಿನಾಂಕ : 16–7–2010.

**ಪ್ರಸ್ತಾವನೆ :**

ಶ್ರೀ ಡಿ.ವೈ. ತಳವಾರ್, ಪ್ರಥಮ ದರ್ಜೆ ಸಹಾಯಕ, ರಾಜ್ಯ ಲೆಕ್ಕಪತ್ರ ಇಲಾಖೆ ಅವರು ಹಿಂದೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ (ರಾಜ್ಯ ವಲಯ) ಬೆಳಗಾವಿ ಇಲ್ಲಿ ನಿಯೋಜನೆ ಮೇರೆಗೆ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಜಿಲ್ಲಾ ನರ್ಸರಿಯಲ್ಲಿ ಮಾಸಿಕ ದರದ ನೌಕರರಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀಮತಿ ರುಕ್ಮಿಣಿ ಎಲ್ಲಪ್ಪ ದೇವಗೇಕರ್ ಇವರು ದಿನಾಂಕ : 1–2–1992 ರಂದು ನಿಧನ ಹೊಂದಿದ ನಂತರ ಅವರ ಸೊಸೆ ಶ್ರೀಮತಿ ಸುಮನ್ ಮಹದೇವ ದೇವಗೇಕರ್‌ರವರಿಗೆ ದಿ : ರುಕ್ಮಿಣಿ ಎಲ್ಲಪ್ಪ ದೇವಗೇಕರ್ ರವರ ಹೆಸರಿನಲ್ಲಿಯೇ ಹಾಜರಾತಿಯೊಂದಿಗೆ ಮಾಸಿಕ ದರದ ನೌಕರರಾಗಿ ವೇತನವನ್ನು ಪಾವತಿಸಲು ಶಿಫಾರಸ್ಸು ಮಾಡಿರುವುದಲ್ಲದೇ ದಿನಗೂಲಿ ನೌಕರರಿಗೆ ಮೃತರ ಹೆಸರಿನಲ್ಲಿ ಮಾಸಿಕ ದರ ವೇತನವನ್ನು ಪಾವತಿಸಿ, ಸರ್ಕಾರಿ ನಿಯಮಗಳನ್ನು ಉಲ್ಲಂಘಿಸಿ ಹಣ ದುರುಪಯೋಗವಾಗಲು ಕಾರಣರಾದ ಆರೋಪಕ್ಕಾಗಿ ಇತರರೊಡನೆ ಅವರ ವಿರುದ್ಧವೂ ಸಹ ಮೇಲೆ (1)ರಲ್ಲಿ ಓದಲಾದ ದಿನಾಂಕ: 10–8–2006 ರ ಸರ್ಕಾರಿ ಆದೇಶದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಬಿ.ಎಲ್. ಶ್ರೀಕಂಠಯ್ಯ, ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಗಳಾಗಿ ಮತ್ತು ಶ್ರೀ ಕಾಂಬಳೆ, ವ್ಯವಸ್ಥಾಪಕರು, ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ (ಜಿ.ಪಂ.) ಧಾರವಾಡ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು. ವಿಚಾರಣಾಧಿಕಾರಿಗಳು ವಿಚಾರಣೆಯನ್ನು ನಡೆಸಿ ಮೇಲೆ (3)ರಲ್ಲಿ ಓದಲಾದ ದಿನಾಂಕ: 6–11–2009ರ ವಿಚಾರಣಾ ವರದಿ ಸಲ್ಲಿಸಿ ಆರೋಪ ಕುರಿತಂತೆ ಕೆಳಕಂಡ ನಿರ್ಣಯ ನೀಡಿದರು.

ಶ್ರೀಮತಿ ರುಕ್ಮಿಣಿ ಎಲ್ಲಪ್ಪ ದೇವಗೇಕರ್ ಅವರು ದಿನಗೂಲಿ ನೌಕರರಾಗಿ ಬೆಳಗಾವಿಯ ನರ್ಸರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು. ದಿನಾಂಕ : 1–2–1992 ರಂದು ನಿಧನ ಹೊಂದಿದರು. ಅವರನ್ನು ದಿನಗೂಲಿಯಿಂದ ಮಾಸಿಕ ವೇತನದ ನೌಕರರನ್ನಾಗಿ (ಎಂ.ಆರ್.ಡಬ್ಲ್ಯೂ) ಪರಿವರ್ತಿಸಿದ ಆದೇಶವು ಅವರ ನಿಧನದ ನಂತರ ಕಛೇರಿಗೆ ತಲುಪಿತು. ಆರೋಪಿಯು ನಿಧನ ಹೊಂದಿದ ಶ್ರೀಮತಿ ರುಕ್ಮಿಣಿ ದೇವಗೇಕರ ಅವರ ಹೆಸರಿನಲ್ಲೇ ಅವರ ಸೊಸೆ ಶ್ರೀಮತಿ ಸುಮನ್ ದೇವಗೇಕರ ಅವರಿಗೆ ಎಂಆರ್.ಡಬ್ಲ್ಯೂ. ದರದಲ್ಲಿ ವೇತನ ಪಾವತಿಸಲು ಕಾಗದ ಪತ್ರಗಳೊಡನೆ ಕಡತ ಸಿದ್ದಪಡಿಸಿ ಮೇಲಧಿಕಾರಿಗಳ ಷಾಮೀಲಿನೊಡನೆ ಅವರ ಅನುಮೋದನೆ ಪಡೆದು ದಿನಾಂಕ : 14–5–1992ರ ಆದೇಶ ಹೊರಡಿಸಿ ದಿನಾಂಕ : 1–1–1990 ರಿಂದ 31–5–1992ರವರೆಗಿನ ಎಂ.ಆರ್.ಡಬ್ಲ್ಯೂ ಬಾಕಿ ರೂ. 8450/–ಗಳನ್ನು ಪಾವತಿಸಿರುವುದು ಪ್ರಕರಣದ ಮೂವರು ಸಾಕ್ಷಿಗಳ ಹೇಳಿಕೆಯಿಂದ ದಾಖಲೆಗಳ ಪರಿಶೀಲನೆಯಿಂದ ದೃಢಪಟ್ಟಿದ್ದು ಆರೋಪವು ಸಾಭೀತಾಗಿದೆ.

ಮೇಲ್ಕಂಡ ವಿಚಾರಣಾ ವರದಿಯ ಪ್ರತಿಯೊಡನೆ ಆರೋಪಿ ಶ್ರೀ ಡಿ.ವೈ. ತಳವಾರ್, ಲೆಕ್ಕಾಧೀಕ್ಷಕರಿಗೆ ಮೇಲೆ (3)ರಲ್ಲಿ ಓದಲಾದ ದಿನಾಂಕ: 4–1–2010 ರಿಂದ 2ನೇ ನೋಟೀಸ್ ನೀಡಿ ವಿಚಾರಣಾ ವರದಿ ಕುರಿತು ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಆರೋಪಿಯು ಮೇಲೆ (4)ರಲ್ಲಿ ಓದಲಾದ ದಿನಾಂಕ : 16–7–2010ರ ಉತ್ತರ ನೀಡಿ ತಾನು ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು. ದಿನಗೂಲಿ ನೌಕರರುಗಳು ನರ್ಸರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದರು ಹಾಗೂ ಅವೆರಡೂ ಬೇರೆ ಬೇರೆ ಕಡೆ ಇದ್ದ ಕಾರಣ ಕಛೇರಿಯೊಡನೆ ನರ್ಸರಿಗೆ ನೇರ ಸಂಪರ್ಕ ಇರಲಿಲ್ಲ ದಿನಗೂಲಿ ನೌಕರರ ಉಸ್ತುವಾರಿ ವಹಿಸುತ್ತದ್ದ ಸಿಬ್ಬಂದಿಯು ಎನ್.ಎಂ.ಆರ್. ನಲ್ಲಿ ದಿನಗೂಲಿ ನೌಕರರ ಪಟ್ಟಿ ಸಲ್ಲಿಸಿ ಕಛೇರಿಯಿಂದ ನಗದಾಗಿ ಹಣವನ್ನು ಪಡೆದು ಕ್ಷೇತ್ರ ಮಟ್ಟದಲ್ಲಿ ಅದನ್ನು ವಿತರಿಸಿ ಸ್ವೀಕೃತಿಯನ್ನು ಒಪ್ಪಿಸುತ್ತಿದ್ದರು. ಈ ಕೆಲಸ ನಿರ್ವಹಿಸುತ್ತಿದ್ದ ಶ್ರೀ ಅಶೋಕ್ ಕುಂದರಗಿಯವರೇ ಸರ್ಕಾರಿ ಆದೇಶವನ್ನನುಸರಿಸಿ ಶ್ರೀಮತಿ ರುಕ್ಮಿಣಿ ಎಲ್ಲಪ್ಪ ದೇವಗೇಕರ್ ಅವರ ಹೆಸರನ್ನು ಎಂ.ಆರ್. ಡಬ್ಲ್ಯೂ. ನಲ್ಲಿ ಸೇರಿಸಲು ಸಲ್ಲಿಸಿದ ಮೇರೆಗೆ ತಾನು ಕಛೇರಿಯಲ್ಲಿ ಕಡತ ತೆರೆದು ಮೇಲಧಿಕಾರಿಗಳ ಆದೇಶ ಪಡೆದು ಸೇವಾ ಪುಸ್ತಕ ತೆರೆದು ಎಂ.ಆರ್.ಡಬ್ಲ್ಯೂ ನಂತೆ ಸಂಬಳ ನೀಡಲು ಕ್ರಮ ಕೈಗೊಂಡಿದ್ದೇನೆ. ಆನಂತರ ಅವರಿಗೆ 1998ರಲ್ಲಿ ಮಿಲ್ಲತ್ ಕ್ರೆಡಿಟ್ ಕೋ ಆಪರೇಟಿವ್ ಸೊಸೈಟಿಯು ಸಾಲ ನೀಡಿದೆ. ತೋಟಗಾರಿಕೆ ಸಹಾಯಕರು ಇದಕ್ಕಾಗಿ ವೇತನ ಪತ್ರವನ್ನೂ ನೀಡಿದ್ದಾರೆ ಇಡೀ ವಿಚಾರವು ಆನಂತರ ಬೆಳಕಿಗೆ ಬಂದು Impersonation ಗಾಗಿ ಶ್ರೀಮತಿ ಸುಮನ್ ದೇವಗೇಕರ್ ವಿರುದ್ಧ ಬೆಳಗಾವಿಯ 3ನೇ ಜೆ.ಎಂ.ಎಫ್.ಸಿ. ನ್ಯಾಯಾಲಯದಲ್ಲಿ ಕ್ರಿಮಿನಲ್ ಮೊಕದ್ದಮೆ ಸಂಖ್ಯೆ : 847/2005ರಲ್ಲಿ ವಿಚಾರಣೆಯಲ್ಲಿದೆ ಎಂದು ತಿಳಿಸಿ ಇಂತಹ ಪರಿಸ್ಥಿತಿಯಲ್ಲಿ ನರ್ಸರಿ ಉಸ್ತುವಾರಿ ನೌಕರರು ಹಾಗೂ ಮೇಲಧಿಕಾರಿಗಳ ಆದೇಶ ಮೇರೆಗೆ ತಾನು ಕಾರ್ಯನಿರ್ವಹಿಸಿದ ಕಾರಣ ಸಮರ್ಪಕ ವಿಚಾರಣೆ ನಡೆಸದೇ ನೀಡಲಾದ ವಿಚಾರಣಾಧಿಕಾರಿಯವರ ನಿರ್ಣಯವನ್ನು ಒಪ್ಪದೇ ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿದ್ದಾರೆ.

ಆರೋಪಿ ನೌಕರರ ಉತ್ತರದಿಂದಾಗಿ ಪ್ರಕರಣವನ್ನು ದಾಖಲೆಗಳೊಡನೆ ಪರಿಶೀಲಿಸಲಾಗಿದೆ. ಆರೋಪಿಯು ತಿಳಿಸುವಂತೆ ದಿನಗೂಲಿ ವ್ಯವಸ್ಥೆಯೇ ಮುಂದುವರಿದಿದ್ದಲ್ಲಿ ಅವರು ಹೇಳುವಂತೆ ತಿಂಗಳ ದಿನಗೂಲಿ ಪಾವತಿಗಾಗಿ ಪ್ರತಿ ತಿಂಗಳೂ ಅಡ್ಡ ಪರಿಶೀಲನೆಯ ಅವಶ್ಯಕತೆ ಉದ್ಭವಿಸುವುದಿಲ್ಲ. ಆದರೆ ದಿನಗೂಲಿ ನೌಕರರನ್ನು ಎಂ.ಆರ್.ಡಬ್ಲ್ಯೂ.ಗೆ ಪರಿವರ್ತಿಸಿದಾಗ ಅವರ ವೇತನದಲ್ಲಿ ಬದಲಾವಣೆ ಉಂಟಾಗುತ್ತದೆ. ದಿನಗೂಲಿ ಬದಲಾಗಿ ಅವರನ್ನೇ ವೇತನ ಶ್ರೇಣಿಯಲ್ಲಿ ತಂದು ವೇತನವನ್ನು ನಿಗಧಿಪಡಿಸಲಾಗುತ್ತದೆ. ದಿನಗೂಲಿಗಿಂತ ಹೆಚ್ಚಿನ ಮೊತ್ತ ನೀಡಲಾಗುತ್ತದೆ. ಕೆಲವು ಸೌಲಭ್ಯಗಳು ದೊರಕುವ ಕಾರಣ ಸರ್ಕಾರಕ್ಕೆ ಹಣಕಾಸಿಗೆ ಸಂಬಂಧಿಸಿದ Liability ಆಗುವಾಗ ಅಂತಹ ಪ್ರಕರಣದಲ್ಲಿ ಸಂಬಂಧಪಟ್ಟವರು ಅಡ್ಡ ಪರಿಶೀಲನೆ (Cross check) ಮಾಡಲೇ ಬೇಕು. ಇದು ನಿಯಮಗಳಲ್ಲೇ ನಿಗಧಿಪಡಿಸಲ್ಪಟ್ಟಿದೆ. ಇದನ್ನು ಆರೋಪಿಯು ಮಾಡದೇ ಇರುವ ಕಾರಣ ಅವರ ವಿರುದ್ಧ ವಿಚಾರಣೆಯಲ್ಲಿನ ನಿರ್ಣಯ ಸೂಕ್ತವಾದುದೇ ಆಗಿದೆ. ಈ ಪ್ರಕರಣದಲ್ಲಿ ಆರೋಪ ಸಾಭೀತಾಗಿರುವ ಇತರರಿಗೆ ತೋಟಗಾರಿಕೆ ಇಲಾಖೆಯವತಿಯಿಂದ ದಂಡನೆಗಳನ್ನು ವಿಧಿಸಲಾಗಿದೆ. ಆದ್ದರಿಂದ ಶ್ರೀ ಡಿ.ವೈ. ತಳವಾರ್ ಅವರ ವಾದವನ್ನು ಒಪ್ಪದೇ ಆರೋಪಗಳು ಸಾಭೀತಾಗಿದೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡು ದಂಡ ವಿಧಿಸಲು ನಿರ್ಣಯಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ : ಆಇ 357 ರಾಲೆಪ 2011, ಬೆಂಗಳೂರು, ದಿನಾಂಕ : 15–4–2013.**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮಾವಳಿಗಳ ನಿಯಮ 11, 11–ಎ ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿಯ ನಿಯಮ 8(ivಎ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಡಿ.ವೈ.ತಳವಾರ್, ಲೆಕ್ಕಾಧೀಕ್ಷಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರ ವೇತನವನ್ನು ವೇತನ ಶ್ರೇಣಿ ರೂ. 22,800–600–24,600–700–28,800–800–33,600–900–39,000–1050–43,200ರಲ್ಲಿ ಪ್ರಸ್ತುತ ಪಡೆಯುತ್ತಿರುವ ರೂ. 28,100/– ರಿಂದ ಎರಡು ಹಂತ ಕೆಳಗೆ ಅಂದರೆ ರೂ. 26,700/–ಕ್ಕೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಇಳಿಸುತ್ತದೆ. ಈ ಅವಧಿಯಲ್ಲಿ ಅವರ ವೇತನವು ಸ್ಥಿರವಾಗಿರುತ್ತದೆ. ಈ ದಂಡನೆಯು ಅವರ ಮುಂದಿನ ವಾರ್ಷಿಕ ವೇತನ ಬಡ್ತಿಗಳನ್ನು ಮುಂದೂಡುವ ಪರಿಣಾಮ ಬೀರುವುದಿಲ್ಲ. ನೌಕರರ ಕಳೆದ ವೇತನ ಬಡ್ತಿಯ ದಿನಾಂಕವು 1–5–2012 ಆಗಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ).

**P.R. 531**

## ಆರ್ಥಿಕ ಸಚಿವಾಲಯ

**ವಿಷಯ :** ಶ್ರೀ ಬಿ. ಗಂಗಣ್ಣ, ಮುಖ್ಯ ಲೆಕ್ಕಾಧಿಕಾರಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸುವ ಬಗ್ಗೆ.

**ಓದಲಾಗಿದೆ :** ಅಪರ ನಿಬಂಧಕರು ವಿಚಾರಣೆಗಳು–1, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ : Compt.Lok. BCD.25/2011 ದಿನಾಂಕ : 21–3–2013 ಮತ್ತು ಸನ್ಮಾನ್ಯ ಲೋಕಾಯುಕ್ತರ ವರದಿ ದಿನಾಂಕ : 20–3–2013.

**ಪ್ರಸ್ತಾವನೆ :**

ರಾಜ್ಯ ಲೆಕ್ಕಪತ್ರ ಇಲಾಖೆ ಅಪರ ನಿಬಂಧಕರು, ವಿಚಾರಣೆಗಳು–1, ಕರ್ನಾಟಕ ಲೋಕಾಯುಕ್ತ ಇವರು ಮೇಲೆ ಓದಲಾದ ಪತ್ರದೊಂದಿಗೆ ಕಳುಹಿಸಿರುವ ದಿನಾಂಕ : 20–3–2013ರ ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984ರ ನಿಯಮ 12(3)ರ ಅಡಿಯಲ್ಲಿ ನೀಡಿರುವ ವರದಿಯಲ್ಲಿ ಶ್ರೀ ಬಿ. ಗಂಗಣ್ಣ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಅವರು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯಲ್ಲಿ ಮುಖ್ಯ ಲೆಕ್ಕಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ, ಲೋಕಾಯುಕ್ತ ಪೊಲೀಸರಿಗೆ ಬಂದ ಖಚಿತ ಮಾಹಿತಿಯನ್ನು ಆಧರಿಸಿ ಒಂದು ತಂಡವು ದಿನಾಂಕ : 20–2–2009ರಂದು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಹೊಸ ಕಟ್ಟಡ ಹಾಗೂ ಚಿಕ್ಕ ಪಾರ್ಕ್ ನಡುವಣ ಜಾದಲ್ಲಿ ನಿಲ್ಲಿಸಲಾಗಿದ್ದ ಕೆಎ–02–ಜೆಡ್ 4448 ರಿಜಿಸ್ಟ್ರೇಶನ್ ಸಂಖ್ಯೆ ಹೊಂದಿರುವ ಕಾರಿನ ಒಳಗೆ ಕುಳಿತು ಹಣ ಎಣಿಸುತ್ತಿದ್ದ ವ್ಯಕ್ತಿಯನ್ನು ತನಿಖೆ ನಡೆಸಲಾಗಿ ಆತನು ತಾನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಮುಖ್ಯ ಲೆಕ್ಕಾಧಿಕಾರಿಯಾದ ಶ್ರೀ ಬಿ. ಗಂಗಣ್ಣ ಎಂದು ತನ್ನ ಗುರುತನ್ನು ತಿಳಿಸಿ ಹೊಂಬೇಗೌಡ ಎಂಬ ಕಂಟ್ರಾಕ್ಟರ್ ಒಬ್ಬರು ಅವರ ಪಾಲೂ ಸೇರಿದಂತೆ ಉಳಿದ ಕಂಟ್ರಾಕ್ಟರ್‌ಗಳಿಂದ ಸಂಗ್ರಹಿಸಿದ ಹಣ ರೂ. 5,03,000/– ಎಂದು ತಿಳಿಸಲಾಗಿ ಸದರಿ ಮೊತ್ತವನ್ನು ಲೋಕಾಯುಕ್ತ ಪೊಲೀಸರು ವಶಪಡಿಸಿಕೊಂಡು, ಶ್ರೀ ಬಿ. ಗಂಗಣ್ಣ ರವರ ಕಛೇರಿಯ ಕೊಠಡಿಯ ಟೇಬಲ್ ಡ್ರಾಯರ್‌ಗಳನ್ನು ಶೋಧಿಸಿದಾಗ ರೂ. 51,600/– ದೊರಕಿದೆ ಎಂದು ತಿಳಿಸಿದ್ದಾರೆ. ಈ ಮೊತ್ತಕ್ಕೆ ಸಮಾಧಾನಕರವಾದ ವಿವರಣೆ/ಲೆಕ್ಕಾಚಾರ ನೀಡಲು ಶ್ರೀ ಬಿ. ಗಂಗಣ್ಣ, ಮುಖ್ಯ ಲೆಕ್ಕಾಧಿಕಾರಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಇವರು ವಿಫಲರಾಗಿರುವುದರಿಂದ ಹಾಗೂ ಈ ಬಗ್ಗೆ ನಡೆದ ಮುಂದಿನ ತನಿಖೆಯಿಂದಾಗಿ ಸಂಗ್ರಹವಾಗಿರುವ ಸಂಗತಿಗಳು, ಮಾಹಿತಿ, ದಾಖಲೆ ಆಧಾರಗಳಿಂದ ಸದರಿ ನೌಕರರು ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಗಳು 1966ರ ನಿಯಮ 3(1) ಮತ್ತು ನಿಯಮ 16ರಡಿಯಲ್ಲಿ ಉಕ್ತವಾದ ದುರ್ನಡತೆ ಎಸಗಿರುವುದು ಮೇಲ್ನೋಟಕ್ಕೆ ಸ್ಥಿರಪಟ್ಟಿದ್ದು ಸದರಿ ದುರ್ನಡತೆ ಸಂಬಂಧದಲ್ಲಿ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸುವ ಬಗ್ಗೆ ವಿಚಾರಣೆ ನಡೆಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 14–ಎ ರನ್ವಯ ಪ್ರಕರಣವನ್ನು ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸುವಂತೆ ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಪ್ರಕರಣವನ್ನು ಪೂರ್ಣ ಪ್ರಮಾಣದ ವಿಚಾರಣೆಗಾಗಿ ಸನ್ಮಾನ್ಯ ಲೋಕಾಯುಕ್ತರಿಗೆ ವಹಿಸಲು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ : ಆಇ 149 ರಾಲೆಪ 2013, ಬೆಂಗಳೂರು, ದಿನಾಂಕ : 12–4–2013.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 14–ಎ ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಬಿ. ಗಂಗಣ್ಣ, ಜಂಟಿ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ (ಹಿಂದಿನ ಮುಖ್ಯ ಲೆಕ್ಕಾಧಿಕಾರಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ) ಇವರ ವಿರುದ್ಧ ಮೇಲೆ ಹೇಳಿದ ಆರೋಪಗಳ ಕುರಿತು ಪೂರ್ಣ ಪ್ರಮಾಣದ ಇಲಾಖಾ ವಿಚಾರಣೆಯನ್ನು ಸನ್ಮಾನ್ಯ ಲೋಕಾಯುಕ್ತ ಅವರ ಮೂಲಕ ನಡೆಯಬೇಕೆಂದು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್. ಲಕ್ಷ್ಮಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ).

**P.R. 532**

## ಹಿಂದುಳಿದ ವರ್ಗಗಳ ಕಲ್ಯಾಣ ಸಚಿವಾಲಯ

**ವಿಷಯ :** ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದಿಂದ ಗಂಗಾ ಕಲ್ಯಾಣ ಯೋಜನೆಯಡಿ ಕೊರೆದ ಕೊಳವೆ ಬಾವಿಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸುವ ವಿಷಯದ ಉಸ್ತುವಾರಿಗಾಗಿ ಆಯಾ ವಿಧಾನಸಭಾ ಕ್ಷೇತ್ರದ ವಿಧಾನಸಭಾ ಸದಸ್ಯರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಸಕಇ/221/ಬಿಸಿಎ/2008, ದಿನಾಂಕ : 2–1–2009.

2. ಏಕ ಕಡತ ಸಂಖ್ಯೆ : ಗಂಕ/ವಿ/ಸಿಆರ್–1/12–13, ದಿನಾಂಕ : 26–11–2012.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿನಾಂಕ : 2–1–2009ರ ಆದೇಶದಲ್ಲಿ ಗಂಗಾ ಕಲ್ಯಾಣ ಯೋಜನೆಯಡಿ ಫಲಾನುಭವಿಗಳ ಆಯ್ಕೆಗೆ ಆಯಾ ವಿಧಾನಸಭಾ ಕ್ಷೇತ್ರದ ಮಾನ್ಯ ಶಾಸಕರ ಅಧ್ಯಕ್ಷತೆಯಲ್ಲಿನ ಆಯ್ಕೆ ಸಮಿತಿಯನ್ನು ರಚಿಸಲಾಗಿರುತ್ತದೆ. ಆಯ್ಕೆ ಸಮಿತಿಯ ಮೂಲಕ ಫಲಾನುಭವಿಗಳು ಆಯ್ಕೆಗೊಂಡ ನಂತರ ಕೊಳವೆ ಬಾವಿ ಕೊರೆಯಿಸಿ, ಪಂಪ್‌ಸೆಟ್ ಹಾಗೂ ಪೂರಕ ಸಾಮಗ್ರಿಗಳನ್ನು ಒದಗಿಸಿ ಫಲಾನುಭವಿಗಳ ಪರವಾಗಿ ವಿದ್ಯುತ್ ಠೇವಣಿ ಮೊತ್ತವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತದಿಂದ ಪಾವತಿಸಲಾಗುತ್ತಿದೆ.

ಮೇಲೆ (2)ರಲ್ಲಿ ಓದಲದ ದಿನಾಂಕ : 26–11–2012ರ ಏಕಕಡತದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ, ಬೆಂಗಳೂರು, ಇವರು ಗಂಗಾ ಕಲ್ಯಾಣ ಯೋಜನೆಯಡಿಯಲ್ಲಿ ಕೊರೆದ ಕೊಳವೆ ಬಾವಿಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಿ ಅಧಿಕೃತವಾಗಿ ಆರ್.ಆರ್. ಸಂಖ್ಯೆ ನೀಡಲು ಹೆಚ್ಚಿನ ಸಮಯ ತೆಗೆದುಕೊಳ್ಳುತ್ತಿದ್ದು ಈ ಬಗ್ಗೆ ಪರಿಶೀಲಿಸಿ, ವಿದ್ಯುತ್ ಸಂಪರ್ಕವನ್ನು ತ್ವರಿತವಾಗಿ ಕಲ್ಪಿಸಲು ಹಾಗೂ ಈ ಬಗ್ಗೆ ಇರುವ ಅಡಚಣೆಗಳನ್ನು ನಿವಾರಿಸಲು ಆಯಾ ವಿಧಾನಸಭಾ ಕ್ಷೇತ್ರದ ಮಾನ್ಯ ಶಾಸಕರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲು ಪ್ರಸ್ತಾವನೆಯನ್ನು ಸಲ್ಲಿಸಿ, ಆದೇಶ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ : ಬಿಸಿಡಬ್ಲ್ಯೂ 18 ಬಿಎಂಎಸ್ 2013, ಬೆಂಗಳೂರು, ದಿನಾಂಕ : 15–1–2013.**

ಪ್ರಸ್ತಾವನೆಯನ್ನು ಪರಿಶೀಲಿಸಿ, ಗಂಗಾ ಕಲ್ಯಾಣ ಯೋಜನೆಯಡಿ ಕೊರೆದ ಕೊಳವೆ ಬಾವಿಗಳಿಗೆ ತ್ವರಿತವಾಗಿ ವಿದ್ಯುತ್ ಸಂಪರ್ಕ ಕಲ್ಪಿಸಲು, ಆಯಾ ವಿಧಾನಸಭಾ ಕ್ಷೇತ್ರದ ಮಾನ್ಯ ಶಾಸಕರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರುಗಳನ್ನು ಒಳಗೊಂಡ ಸಮಿತಿಯನ್ನು ರಚಿಸಲಾಗಿದೆ.

| | | |
|---|---|---|
| 1. | ಆಯಾ ವಿಧಾನಸಭಾ ಕ್ಷೇತ್ರದ ಶಾಸಕರು | ಅಧ್ಯಕ್ಷರು |
| 2. | ತಾಲ್ಲೂಕಿನಲ್ಲಿ ಖಾಯಂ ಆಗಿ ವಾಸಿಸುತ್ತಿರುವ ವಿಧಾನ ಪರಷತ್ತಿನ ಸದಸ್ಯರು | ಸದಸ್ಯರು |
| 3. | ಸಂಬಂಧಿಸಿದ ತಾಲ್ಲೂಕು ತಹಶೀಲ್ದಾರರು | ಸದಸ್ಯರು |
| 4. | ಕಾರ್ಯನಿರ್ವಾಹಣಾಧಿಕಾರಿ, ತಾಲ್ಲೂಕು ಪಂಚಾಯತ್ | ಸದಸ್ಯರು |
| 5. | ಆಯಾ ವಿಧಾನ ಸಭಾ ಕ್ಷೇತ್ರಕ್ಕೆ ಒಳಪಡುವ ಸಹಾಯಕ ಕಾರ್ಯಪಾಲಕ ಅಭಿಯಂತರರು, ವಿದ್ಯುತ್ ಸರಬರಾಜು ಕಂಪನಿ | ಸದಸ್ಯರು |
| 6. | ಸಹಾಯಕ ಕಾರ್ಯಪಾಲಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ಇಲಾಖೆ | ಸದಸ್ಯರು |
| 7. | ಹಿಂದುಳಿದ ವರ್ಗಗಳ ಇಲಾಖೆಯ ವಿಸ್ತರಣಾಧಿಕಾರಿಗಳು | ಸದಸ್ಯರು |
| 8. | ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಜಿಲ್ಲಾ ವ್ಯವಸ್ಥಾಪಕರು | ಸದಸ್ಯ ಕಾರ್ಯದರ್ಶಿ |

ಮೇಲ್ಕಂಡ ಸಮಿತಿಯು ಕನಿಷ್ಠ ಮೂರು ತಿಂಗಳಿಗೊಮ್ಮೆ ಸಭೆ ಸೇರಿ ಈ ಕೆಳಕಂಡ ಅಂಶಗಳ ಬಗ್ಗೆ ಪರಿಶೀಲಿಸಿ ಸೂಕ್ತ ತೀರ್ಮಾನ ಕೈಗೊಳ್ಳುವುದು ಹಾಗೂ ಕಾರ್ಯಗಳನ್ನು ನಿರ್ವಹಿಸುವುದು.

1. ಗಂಗಾ ಕಲ್ಯಾಣ ಯೋಜನೆಯಲ್ಲಿ ಕೊರೆದ ಕೊಳವೆ ಬಾವಿಗಳಿಗೆ ವಿದ್ಯುದ್ಧೀಕರಣಗೊಳಿಸುವ ಕೆಲಸದ ಉಸ್ತುವಾರಿ, ವಿದ್ಯುದ್ಧೀಕರಣ ಪ್ರಗತಿ ಪರಿಶೀಲನೆ ಹಾಗೂ ವಿವಿಧ ಇಲಾಖೆಗಳೊಂದಿಗೆ ಸಮನ್ವಯ ಏರ್ಪಡಿಸಿ ವಿದ್ಯುದ್ಧೀಕರಣ ಪ್ರಗತಿಯನ್ನು ಹೆಚ್ಚಿಸುವುದು.

2. ಕೊಳವೆ ಬಾವಿಯನ್ನು ಕೊರೆದು ವಿದ್ಯುತ್ ಸಂಪರ್ಕಕ್ಕೆ ಬಾಕಿ ಉಳಿದಿರುವ ಕೊಳವೆ ಬಾವಿಗಳ ಫಲಾನುಭವಿವಾರು ಮಾಹಿತಿಯನ್ನು ಸಭೆಯಲ್ಲಿ ಸಮೀಕ್ಷಿಸಿ ವಿದ್ಯುದ್ಧೀಕರಣಗೊಳಿಸುವಲ್ಲಿ ಇರುವ ಅಡಚಣೆಗಳನ್ನು ನಿವಾರಿಸಿ ಶೀಘ್ರವಾಗಿ ವಿದ್ಯುತ್ ಸಂಪರ್ಕ ಕಲ್ಪಿಸಲು ಎಲ್ಲಾ ಅಗತ್ಯ ಕ್ರಮಗಳನ್ನು ಕೈಗೊಳ್ಳುವುದು.

3. ಗಂಗಾ ಕಲ್ಯಾಣ ಯೋಜನೆ ಅನುಷ್ಠಾನಕ್ಕೆ ಕಂದಾಯ ಇಲಾಖೆಯಿಂದ ಜಮೀನು ದಾಖಲಾತಿಗಳನ್ನು ತ್ವರಿತವಾಗಿ ಹಾಗೂ ವಿದ್ಯುದ್ಧೀಕರಣಗೊಳಿಸಲು ಕಂದಾಯ ಇಲಾಖೆಯಿಂದ ಅಗತ್ಯವಿರುವ ನೆರವು ದೊರಕಿಸಿಕೊಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಜಿ. ಮುಳಕೂರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ.

P.R. 520

**ಕಾರ್ಮಿಕ ಸಚಿವಾಲಯ**

**ವಿಷಯ:** ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಗೆ ಹೊಸದಾಗಿ ಮಂಜೂರಾಗಿರುವ ಕಾರ್ಯನಿರ್ವಾಹಕ ಹಾಗೂ ಆಡಳಿತ ಸಹಾಯಕ (Executive cum Administrative Assistant) ಹುದ್ದೆಗಳನ್ನು ಕೇಂದ್ರ ಕಛೇರಿಯಿಂದ ಸ್ಥಳಾಂತರಿಸಿ ಕಾರ್ಯಸ್ಥಾನ ನಿಗದಿಪಡಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂ: ಕಾಇ 49 ಕಾಬಾಸೇ 2011, ದಿನಾಂಕ: 21-07-2012.

2. ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ: ಈಎಸ್‌ಟಿ-1/ಆರ್‌ಪಿಪಿ/ಸಿಆರ್-03/2012-13, ದಿನಾಂಕ:18-02-13.

**ಪ್ರಸ್ತಾವನೆ:**

1. ಕರ್ನಾಟಕ ವಿಧಾನ ಮಂಡಲದ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಮಿತಿಯ 14ನೇ ವರದಿಯಲ್ಲಿನ ಶಿಫಾರಸ್ಸಿನನ್ವಯ ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 21-07-2012ರ ಸರ್ಕಾರದ ಆದೇಶದಲ್ಲಿ ಈ ಕೆಳಕಂಡ ಹುದ್ದೆಗಳನ್ನು ಸೃಜಿಸಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಹುದ್ದೆಗಳ ವಿವರ | ವೇತನ ಶ್ರೇಣಿ | ಮಂಜೂರಾತಿ ನೀಡಿರುವ ಹುದ್ದೆಗಳ ಸಂಖ್ಯೆ |
|---|---|---|---|
| 1 | ಕಾರ್ಖಾನೆಗಳ ಸಹಾಯಕ ನಿರ್ದೇಶಕರು | ರೂ. 22800-43200 | 10 |
| 2 | ಪತ್ರಾಂಕಿತ ವ್ಯವಸ್ಥಾಪಕರು | ರೂ. 21600-40050 | 01 |
| 3 | ಕಾರ್ಯನಿರ್ವಾಹಕ ಹಾಗೂ ಆಡಳಿತ ಸಹಾಯಕರು | ರೂ. 20000-36300 | 05 |
| 4 | ಪ್ರಥಮ ದರ್ಜೆ ಸಹಾಯಕರು | ರೂ. 14550-26700 | 03 |
| 5 | ದ್ವಿತೀಯ ದರ್ಜೆ ಸಹಾಯಕರು | ರೂ. 11600-21000 | 05 |
| | | **ಒಟ್ಟು** | **24** |

2. ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ನಿರ್ದೇಶಕರು ಮೇಲೆ (2) ರಲ್ಲಿ ಓದಲಾದ ಅವರ ದಿನಾಂಕ: 18-02-2013 ರ ಪತ್ರದಲ್ಲಿ ಈ ಕೆಳಗಿನಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ:

3. ಅವರ ಇಲಾಖೆಗೆ ಮೇಲೆ (1) ರಲ್ಲಿ ಓದಲಾದ ದಿನಾಂಕ: 21-07-2012ರ ಸರ್ಕಾರದ ಆದೇಶದ ಮೂಲಕ ಮಂಜೂರಾದ ವಿವಿಧ ವೃಂದಗಳ 24 ಹುದ್ದೆಗಳನ್ನು ನೇರ ನೇಮಕಾತಿಯಿಂದ / ಪದೋನ್ನತಿಯಿಂದ ಭರ್ತಿ ಮಾಡಲು ಕ್ರಮ ಜರುಗಿಸಲಾಗುತ್ತಿದೆ. ಸದರಿ ಆದೇಶದ ಕ್ರ.ಸಂ.03 ರಲ್ಲಿನ ಕಾರ್ಯನಿರ್ವಾಹಕ ಹಾಗೂ ಆಡಳಿತ ಸಹಾಯಕರ (Executive cum Administrative Assistant) 05 ಹುದ್ದೆಗಳಿಗೆ ಕಾರ್ಯಸ್ಥಾನ ಗುರುತಿಸಿ ಪ್ರಥಮ ದರ್ಜೆ ಸಹಾಯಕರ ವೃಂದದಿಂದ ಪದೋನ್ನತಿ ನೀಡುವ ಮುಲಕ ಭರ್ತಿ ಮಾಡಬೇಕಾಗಿರುತ್ತದೆ. ಈ ಹುದ್ದೆಗಳು ಗ್ರೂಪ್ 'ಸಿ' ಗುಂಪಿನ ವೇತನ ಶ್ರೇಣಿ ರೂ.20,000-36,300 ರಲ್ಲಿದ್ದು ಸದ್ಯಕ್ಕೆ ಪ್ರಧಾನ ಕಛೇರಿ ಕೇಂದ್ರ ಕಾರ್ಯಸ್ಥಾನವಾಗಿರುತ್ತದೆ. ಸದರಿ ವೃಂದದ 15 ಹುದ್ದೆಗಳು ಈಗಾಗಲೇ ಇಲಾಖೆಯ ವಿವಿಧ ಕ್ಷೇತ್ರ ಕಛೇರಿಗಳಲ್ಲಿ ಕಾರ್ಯನಿರತವಾಗಿರುತ್ತವೆ. ಈಗ ಹೊಸದಾಗಿ ಮಂಜೂರಾಗಿರುವ ಈ 05 ಹುದ್ದೆಗಳನ್ನು ಸಹ ಕ್ಷೇತ್ರ ಕಛೇರಿಗಳಲ್ಲೇ ಸ್ಥಾಪಿಸಿ ಕಾರ್ಯನಿರತಗೊಳಿಸಬೇಕಗುತ್ತದೆ. ಇಲಾಖೆಯ ಕಾರ್ಖಾನೆಗಳ ವಿಭಾಗದ 28 ಕ್ಷೇತ್ರ ಕಛೇರಿಗಳ ಪೈಕಿ 15 ಕಛೇರಿಗಳಲ್ಲಿ ಈಗಾಗಲೇ ಸದರಿ ವೃಂದದ ಹುದ್ದೆಗಳಿರುವುದರಿಂದ, ಈ ಕೆಳಕಂಡ 05 ಕಛೇರಿಗಳಲ್ಲಿ ಈ ಹೊಸ ಹುದ್ದೆಗಳನ್ನು ಕಛೇರಿಗೆ ಒಂದರಂತೆ ಸ್ಥಳಾಂತರಿಸಿ ಕಾರ್ಯಸ್ಥಾನ ನಿಗಧಿಪಡಿಸಲು ಸರ್ಕಾರದ ಆದೇಶ ಹೊರಡಿಸಲು ಕೋರಿರುತ್ತಾರೆ.

| ಕ್ರ.ಸಂ. | ಹುದ್ದೆಗಳ ವಿವರ | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರ ಕಛೇರಿ, ವಿಭಾಗ-8, ಬೆಂಗಳೂರು | - 01 ಹುದ್ದೆ |
| 2 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರ ಕಛೇರಿ, ವಿಭಾಗ-9, ಬೆಂಗಳೂರು | - 01 ಹುದ್ದೆ |
| 3 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರ ಕಛೇರಿ, ತುಮಕೂರು ವಿಭಾಗ, ತುಮಕೂರು | - 01 ಹುದ್ದೆ |
| 4 | ಕಾರ್ಖಾನೆಗಳ ಸಹಾಯಕ ನಿರ್ದೇಶಕರ ಕಛೇರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ | - 01 ಹುದ್ದೆ |
| 5 | ಕಾರ್ಖಾನೆಗಳ ಸಹಾಯಕ ನಿರ್ದೇಶಕರ ಕಛೇರಿ, ರಾಯಚೂರು ವಿಭಾಗ, ರಾಯಚೂರು | - 01 ಹುದ್ದೆ |

4. ಇಲಾಖೆಯ ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಸರ್ಕಾರವು ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಾಇ 20 ಕಾಬಾಸೇ 2013 ಬೆಂಗಳೂರು, ದಿನಾಂಕ: 10-04-2013**

ಪ್ರಸ್ತಾವನೆಯಲ್ಲಿ ವಿವರಿಸಲಾದ ಕಾರಣಗಳಿಗಾಗಿ ಸರ್ಕಾರದ ಆದೇಶ ಸಂ: ಕಾಇ 49 ಕಾಬಾಸೇ 2011, ದಿನಾಂಕ: 21-07-2012ರಲ್ಲಿ ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಗೆ ಮಂಜೂರಾದ ವಿವಿಧ ವೃಂದದ ಒಟ್ಟು 24 ಹುದ್ದೆಗಳ ಪೈಕಿ ಸದರಿ ಆದೇಶದ ಕ್ರಮ ಸಂಖ್ಯೆ: (3) ರಲ್ಲಿರುವ ಕಾರ್ಯನಿರ್ವಾಹಕ ಹಾಗೂ ಆಡಳಿತ ಸಹಾಯಕರ (Executive cum Administrative Assistant)ರ 05 ಹುದ್ದೆಗಳನ್ನು ಈ ಕೆಳಗೆ ಕಾಣಿಸಿದ ಕ್ಷೇತ್ರ ಕಛೇರಿಗಳಲ್ಲಿ ಕಛೇರಿಗೆ ಒಂದರಂತೆ ಸ್ಥಳಾಂತರಿಸಿ ಈ ಮೂಲಕ ಕಾರ್ಯಸ್ಥಾನ ನಿಗದಿಪಡಿಸಲಾಗಿದೆ.

| ಕ್ರ.ಸಂ. | ಕ್ಷೇತ್ರ ಕಛೇರಿಯ ಹೆಸರು ಮತ್ತು ವಿಭಾಗ | ಹುದ್ದೆಗಳ ಸಂಖ್ಯೆ |
|---|---|---|
| 1 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರ ಕಛೇರಿ, ವಿಭಾಗ–8, ಬೆಂಗಳೂರು | – 01 ಹುದ್ದೆ |
| 2 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರ ಕಛೇರಿ, ವಿಭಾಗ–9, ಬೆಂಗಳೂರು | – 01 ಹುದ್ದೆ |
| 3 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರ ಕಛೇರಿ, ತುಮಕೂರು ವಿಭಾಗ, ತುಮಕೂರು | – 01 ಹುದ್ದೆ |
| 4 | ಕಾರ್ಖಾನೆಗಳ ಸಹಾಯಕ ನಿರ್ದೇಶಕರ ಕಛೇರಿ, ಶಿವಮೊಗ್ಗ ವಿಭಾಗ, ಶಿವಮೊಗ್ಗ | – 01 ಹುದ್ದೆ |
| 5 | ಕಾರ್ಖಾನೆಗಳ ಸಹಾಯಕ ನಿರ್ದೇಶಕರ ಕಛೇರಿ, ರಾಯಚೂರು ವಿಭಾಗ, ರಾಯಚೂರು | – 01 ಹುದ್ದೆ |

ಈ ಆದೇಶವನ್ನು ಸರ್ಕಾರದ ಆದೇಶ ಸಂ: ಎಫ್‌ಡಿ 01 ಟಿಎಫ್‌ಪಿ 1996, ದಿನಾಂಕ: 10–07–1996 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯದ ರಾಜ್ಯಪಾಲರ ಹೆಸರಿನಲ್ಲಿ ಮತ್ತು ಅವರ ಆದೇಶಾನುಸಾರ

**ಬಿ.ಶಿವರಾಮ ಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಾರ್ಮಿಕ ಇಲಾಖೆ

**P.R.514**

**SC - 125**

## ಕಾರ್ಮಿಕ ಸಚಿವಾಲಯ

**ವಿಷಯ:** ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ಮುಂದುವರೆದ ಯೋಜನಾ ಕಾರ್ಯಕ್ರಮಗಳನ್ನು 2013–14ನೇ ಆರ್ಥಿಕ ವರ್ಷಕ್ಕೆ ಮುಂದುವರೆಸುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ, ಬೆಂಗಳೂರು ರವರ ಪತ್ರ ಸಂ. ಈಎಸ್‌ಟಿ–1/ಆರ್‌ಪಿಪಿ/ ಸಿಆರ್–12/12–13, ದಿನಾಂಕ: :19–03–2013.

**ಪ್ರಸ್ತಾವನೆ:**

ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ನಿರ್ದೇಶಕರು ಮೇಲೆ (1) ರಲ್ಲಿ ಓದಲಾದ ಅವರ ದಿನಾಂಕ: 19–03–2012 ರ ಪತ್ರ ಮುಖೇನ ಅವರ ಇಲಾಖೆಯ 2012–13ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳನ್ನು ಮತ್ತು ಯೋಜನೆ ಅಡಿ ಮುಂದುವರೆಸಲಾದ ಹುದ್ದೆಗಳನ್ನು 2013–14ನೇ ಸಾಲಿನಲ್ಲಿ ಮುಂದುವರೆಸುವಂತೆ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. 2012–13ನೇ ಸಾಲಿನಲ್ಲಿ ಯೋಜನಾ ಕಾರ್ಯಕ್ರಮಗಳನ್ನು ಮತ್ತು ಯೋಜನೆ ಅಡಿ ಇರುವ ಹುದ್ದೆಗಳನ್ನು 2013–14ನೇ ಸಾಲಿನಲ್ಲಿ ಮುಂದುವರೆಸುವ ಬಗ್ಗೆ ಕಾರ್ಮಿಕ ಇಲಾಖೆಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ದಿನಾಂಕ: 06–04–2013 ರಂದು ನಡೆದ ಸಭೆಯಲ್ಲಿ ವಿವರವಾಗಿ ಚರ್ಚಿಸಿ ಯೋಜನೆ ಲೆಕ್ಕ ಶೀರ್ಷಿಕೆ "2230–01–102–0–01 (ಪ್ಲಾನ್)", "ವರ್ಕಿಂಗ್ ಕಂಡೀಷನ್ಸ್ ಅಂಡ್ ಸೇಫ್ಟಿ–ಇನ್ಸ್‌ಪೆಕ್ಟರ್ ಆಫ್ ಫ್ಯಾಕ್ಟರೀಸ್" ಈ ಯೋಜನೆ ಅಡಿಯಲ್ಲಿ 18 ಹುದ್ದೆಗಳನ್ನು 2013–14ನೇ ಸಾಲಿಗೆ ಮುಂದುವರೆಸಲು ಹಾಗೂ ವಿಶೇಷ ಘಟಕ ಯೋಜನೆ (ಎಸ್.ಸಿ.ಪಿ) ಲೆಕ್ಕಶೀರ್ಷಿಕೆ "2230–01–102–0–01–422 (ಯೋಜನೆ)" ಈ ಯೋಜನೆಯನ್ನು 2013–14ನೇ ಸಾಲಿಗೆ ಮುಂದುವರೆಸಲು ಅನುಕೂಲವಾಗುವಂತೆ ಆದೇಶ ಹೊರಡಿಸಲು ಸಭೆಯು ತೀರ್ಮಾನಿಸಿತು. ಆ ಪ್ರಕಾರ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ. ಈ ಯೋಜನೆಗಳಿಗೆ 2013–14ನೇ ಸಾಲಿನ ಆಯವ್ಯಯದಲ್ಲಿ ಒಟ್ಟು ರೂ.110 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ.

**ಸರ್ಕಾರಿ ಆದೇಶ ಸಂ. ಕಾಇ 25 ಕಾಬಾಸೇ 2013, ಬೆಂಗಳೂರು, ದಿನಾಂಕ: 10–04–2013**

ಪ್ರಸ್ತಾವನೆಯಲ್ಲಿ ವಿವರಿಸಿದಂತೆ ಹಾಗೂ ದಿನಾಂಕ: 06–04–2013 ರಂದು ನಡೆದ ಸಭೆಯ ನಡವಳಿಯಂತೆ ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಗೆ ಸಂಬಂಧಿಸಿದಂತೆ 2013–14ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳು ಈ ಕೆಳಗಿನಂತಿವೆ;

1. 2012–13ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮವಾದ "ವರ್ಕಿಂಗ್ ಕಂಡೀಷನ್ಸ್ ಅಂಡ್ ಸೇಫ್ಟಿ–ಇನ್ಸ್‌ಪೆಕ್ಟರ್ ಆಫ್ ಫ್ಯಾಕ್ಟರೀಸ್" ಈ ಯೋಜನೆ ಅಡಿಯಿರುವ ಹುದ್ದೆಗಳನ್ನು 2013–14ನೇ ಸಾಲಿನಲ್ಲಿ ಮುಂದುವರೆಸುವುದು.
2. ವಿಶೇಷ ಘಟಕ ಯೋಜನೆ ಸಹ ರೂಪಿಸಿಕೊಂಡು ಕಾರ್ಖಾನೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಪರಿಶಿಷ್ಟ ಜಾತಿ ಪಂಗಡದಲ್ಲಿ ವರ್ಗೀಕರಣಗೊಂಡ ಕಾರ್ಮಿಕರಿಗೆ ಅವರಿಗಿರುವ ಹಕ್ಕು, ಕಾನೂನು, ಕಲ್ಯಾಣ ಮತ್ತು ಇತರೆ ಸೌಲಭ್ಯಗಳ ಬಗ್ಗೆ ಅರಿವು ಮೂಡಿಸುವಂತಹ ಕಾರ್ಯಕ್ರಮಗಳನ್ನು 2013–14ನೇ ಸಾಲಿನಲ್ಲಿಯೂ ಮುಂದುವರೆಸುವುದು.

ಈ ಮೇಲಿನ ಎರಡು ಯೋಜನಾ ಕಾರ್ಯಕ್ರಮಗಳನ್ನು ಈ ಆದೇಶಕ್ಕೆ ಲಗತ್ತಿಸಿದ ಅನುಬಂಧದಲ್ಲಿ ಇರುವಂತೆ 2013–14ನೇ ಸಾಲಿಗೆ ಮುಂದುವರೆಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಮಂಜೂರಾತಿ ನೀಡಲಾಗಿದೆ:–

1. 2012–13 ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳನ್ನು ಮಾತ್ರ 2013–14ನೇ ಸಾಲಿನಲ್ಲಿ ಮುಂದುವರೆಸಬೇಕು.
2. 2012–13 ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಹುದ್ದೆಗಳು ರದ್ದಾಗಿದ್ದಲ್ಲಿ, ಅಂತಹವುಗಳನ್ನು 2013–14 ನೇ ಸಾಲಿನಲ್ಲಿ ಮುಂದುವರೆದ ಯೋಜನಾ ಕಾರ್ಯಕ್ರಮಗಳಿಂದ ತೆಗೆದು ಹಾಕುವುದು ಹಾಗೂ 2012–13ನೇ ಸಾಲಿನಲ್ಲಿ ಯೋಜನಾ ಕಾರ್ಯಕ್ರಮಗಳನ್ನು ಕೈಬಿಟ್ಟಿದ್ದರೆ ಅಂತಹ ಕಾರ್ಯಕ್ರಮಗಳನ್ನು 2013–14ನೇ ಸಾಲಿನಲ್ಲಿ ಯೋಜನೆಯಡಿಯಲ್ಲಿ ಮುಂದುವರೆದ ಕಾರ್ಯಕ್ರಮಗಳ ಪಟ್ಟಿಯಿಂದ ತೆಗೆದುಹಾಕಬೇಕು.
3. ಮುಂದುವರೆದ ಯೋಜನಾ ಕಾರ್ಯಕ್ರಮಗಳಲ್ಲಿ ಯಾವುದೇ ಹೊಸ ಘಟಕಗಳ ಪ್ರಸ್ತಾವನೆಗಳು, ವಾಹನ ಖರೀದಿ ಪ್ರಸ್ತಾವನೆಗಳು ಇದ್ದಲ್ಲಿ ಅವುಗಳಿಗೆ ಪ್ರತ್ಯೇಕವಾದ ಪ್ರಸ್ತಾವನೆಗಳನ್ನು ಸಲ್ಲಿಸಿ, ನಿಯಮಾನುಸಾರ ಮಂಜೂರಾತಿ ಪಡೆಯಬೇಕು.

4. ಆರ್ಥಿಕ ಇಲಾಖೆಯು ಕಾಲಕಾಲಕ್ಕೆ ಹೊರಡಿಸುವ ಆರ್ಥಿಕ ಮಿತವ್ಯಯ ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂ. ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10–07–1996ರನ್ವಯ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾಗಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸರ್ಕಾರದ ಅಧೀನ ಕಾರ್ಯದರ್ಶಿ**
ಕಾರ್ಮಿಕ ಇಲಾಖೆ
(ಕಾರ್ಖಾನೆಗಳು ಮತ್ತು ಬಾಯ್ಲರುಗಳು)

## ಅನುಬಂಧ

### ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಗೆ ಸಂಬಂಧಿಸಿದಂತೆ 2013–14ನೇ ಸಾಲಿಗೆ ಯೋಜನಾ ಸ್ಕೀಂನಡಿ ಮುಂದುವರೆಸಬೇಕಾದ ಹುದ್ದೆಗಳ ವಿವರ

(ರೂ. ಲಕ್ಷಗಳಲ್ಲಿ)

| ಕ್ರ. ಸಂ. | ಸ್ಕೀಂನ ಹೆಸರು ಮತ್ತು ಖರ್ಚನ್ನು ಕಳೆಯಬೇಕಾದ ಲೆಕ್ಕಶೀರ್ಷಿಕೆ | 2013–14ನೇ ಸಾಲಿಗೆ ಮಂಜೂರಾಗಿರುವ ಬಜೆಟ್ | ಹುದ್ದೆಗಳ ಮಂಜೂರಾತಿ ಆದೇಶ ಮತ್ತು ದಿನಾಂಕ | ಹುದ್ದೆಗಳ ವಿವರ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | ಹುದ್ದೆಗಳ ಕೇಂದ್ರ ಕಾರ್ಯಸ್ಥಾನ/ಕಛೇರಿ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ, ಯೋಜನಾ ಸ್ಕೀಂಗಳು (ಲೆಕ್ಕ ಶೀರ್ಷಿಕೆ 2230–01–102–0–01 ಪ್ಲಾನ್) "ವರ್ಕಿಂಗ್ ಕಂಡೀಷನ್ಸ್ ಅಂಡ್ ಸೇಫ್ಟಿ–ಇನ್ಸ್‌ಪೆಕ್ಟರ್ ಆಫ್ ಫ್ಯಾಕ್ಟರೀಸ್" | 85.34 | ಕಾಇ 106 ಕಾಬಾಸೇ 1998, ದಿ: 25–09–1998 ಮತ್ತು ಕಾಇ 23 ಕಾಬಾಸೇ 2010, ದಿ: 01–04–2010 | ಕಾರ್ಖಾನೆಗಳ ಜಂಟಿ ನಿರ್ದೇಶಕರು (40050–56550) | 1 | ಕಾರ್ಖಾನೆಗಳ ಜಂಟಿ ನಿರ್ದೇಶಕರು–2, ಬೆಂಗಳೂರು |
| | | | | ಕಾರ್ಖಾನೆಗಳ ಉಪ ನಿರ್ದೇಶಕರು (36300–53850) | 1 | ಮಂಗಳೂರು |
| | | | | ಕಾರ್ಖಾನೆಗಳ ಉಪ ನಿರ್ದೇಶಕರು (36300–53850) | 1 | ಬೆಳಗಾವಿ |
| | | | | ಬಾಯ್ಲರುಗಳ ಉಪ ನಿರ್ದೇಶಕರು (36300–53850) | 1 | ದಾವಣಗೆರೆ |
| | | | ಕಾಇ 144 ಕಾಬಾಸೇ 97 (1), ದಿ: 17–01–1998 ಮತ್ತು ಕಾಇ 23 ಕಾಬಾಸೇ 2010, ದಿ: 01–04–2010 | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು (28100–50100) | 1 | ಬೆಂಗಳೂರು |
| | | | | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು (28100–50100) | 1 | ಬೆಳಗಾವಿ |
| | | | ಕಾಇ 201 ಕಾಬಾಸೇ 98 (11), ದಿ: 17–01–1998 ಮತ್ತು ಕಾಇ 23 ಕಾಬಾಸೇ 2010, ದಿ: 01–04–2010 | ಬಾಯ್ಲರುಗಳ ಸಹಾಯಕ ನಿರ್ದೇಶಕರು (ಬಿಟಿಟಿಇಸಿ ಸೆಲ್) (22800–43200) | 1 | ಬೆಂಗಳೂರು |
| | | | ಕಾಇ 201 ಕಾಬಾಸೇ 1995, ದಿ: 26–12–1995 ಮತ್ತು ಕಾಇ 23 ಕಾಬಾಸೇ 2010, ದಿ: 01–04–2010 | ಪ್ರಥಮ ದರ್ಜೆ ಸಹಾಯಕರು (14550–26700) | 1 | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರ ಕಛೇರಿ, ಮಂಗಳೂರು |
| | | | | ಪ್ರಥಮ ದರ್ಜೆ ಸಹಾಯಕರು (14550–26700) | 4 | ಪ್ರಧಾನ ಕಛೇರಿ, ಬೆಂಗಳೂರು |

| ಕ್ರ. ಸಂ. | ಸ್ಕೀಂನ ಹೆಸರು ಮತ್ತು ಖರ್ಚನ್ನು ಕಳೆಯಬೇಕಾದ ಲೆಕ್ಕಶೀರ್ಷಿಕೆ | 2013–14ನೇ ಸಾಲಿಗೆ ಮಂಜೂರಾಗಿರುವ ಬಜೆಟ್ | ಹುದ್ದೆಗಳ ಮಂಜೂರಾತಿ ಆದೇಶ ಮತ್ತು ದಿನಾಂಕ | ಹುದ್ದೆಗಳ ವಿವರ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | ಹುದ್ದೆಗಳ ಕೇಂದ್ರ ಕಾರ್ಯಸ್ಥಾನ/ಕಛೇರಿ |
|---|---|---|---|---|---|---|
| | | | | ಶೀಘ್ರಲಿಪಿಗಾರರು (14550–26700) | 2 | ಪ್ರಧಾನ ಕಛೇರಿ, ಬೆಂಗಳೂರು |
| | | | ಕಾಇ 174 ಕಾಬಾಸೇ 1997, ದಿ: 17–01–1998 ಮತ್ತು ಕಾಇ 23 ಕಾಬಾಸೇ 2010, ದಿ: 01–04–2010 | ಬೆರಳಚ್ಚುಗಾರರು (11600–21000) | 1 | ಪ್ರಧಾನ ಕಛೇರಿ, ಬೆಂಗಳೂರು |
| | | | | ಬೆರಳಚ್ಚುಗಾರರು (11600–21000) | 1 | ಕಾರ್ಖಾನೆಗಳ ಸಹಾಯಕ ನಿರ್ದೇಶಕರ ಕಛೇರಿ, ಗುಲ್ಬರ್ಗಾ |
| | | | | ಸೇವಕ (9600–14550) | 1 | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರ ಕಛೇರಿ, ಮಂಗಳೂರು |
| | | | ಕಾಇ 144 ಕಾಬಾಸೇ 97 (1), ದಿ: 17–01–1998 ಮತ್ತು ಕಾಇ 23 ಕಾಬಾಸೇ 2010, ದಿ: 01–04–2010 | ವಾಹನ ಚಾಲಕರು (11600–21000) | 1 | ಪ್ರಧಾನ ಕಛೇರಿ, ಬೆಂಗಳೂರು |
| | **ಮೊತ್ತ** | **85.34** | | | **18** | |
| 2 | (ಲೆಕ್ಕ ಶೀರ್ಷಿಕೆ: 2230–01–102–0–01–422 ವಿಶೇಷ ಘಟಕ ಯೋಜನೆ) | 24.66 | ಹುದ್ದೆಗಳು ಯಾವುದೂ ಇರುವುದಿಲ್ಲ. | ಹುದ್ದೆಗಳು ಯಾವುದೂ ಇರುವುದಿಲ್ಲ. ಆದರೆ ಕಾರ್ಯಕ್ರಮದಲ್ಲಿ ನೊಂದಾಯಿತ ಕಾರ್ಖಾನೆಗಳಲ್ಲಿ ದುಡಿಯುತ್ತಿರುವ ಪರಿಶಿಷ್ಟ ಜಾತಿಗೆ ಸೇರಿದ ಕಾರ್ಮಿಕರಿಗೆ ಹಕ್ಕು ಮತ್ತು ಕಾನೂನಿನ ಅರಿವು ಮೂಡಿಸಲು ಈ ಸಾಲಿನಲ್ಲಿ 95 ತರಬೇತಿ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದ್ದು, ಈ ತರಬೇತಿ ಕಾರ್ಯಕ್ರಮಗಳಿಗಾಗಿ ಸಾಮಗ್ರಿಗಳನ್ನು ಖರೀದಿಸಲು, ಎಲ್‌ಸಿಡಿ ಪ್ರಾಜೆಕ್ಟ್ ಖರೀದಿಸಲು, ಉಪಹಾರ ಒದಗಿಸಲು, ಗೌರವಧನ ಪಾವತಿಸಲು, ಕೋರ್ಸ್–ಕೋ–ಆರ್ಡಿನೇಟರ್, ಸಂಪನ್ಮೂಲ ವ್ಯಕ್ತಿಗಳ, ತರಬೇತಿ ಸಾಮಗ್ರಿಗಳ | | 24.66 |

| ಕ್ರ. ಸಂ. | ಸ್ಕೀಂನ ಹೆಸರು ಮತ್ತು ಖರ್ಚನ್ನು ಕಳೆಯಬೇಕಾದ ಲೆಕ್ಕಶೀರ್ಷಿಕೆ | 2013–14ನೇ ಸಾಲಿಗೆ ಮಂಜೂರಾಗಿರುವ ಬಜೆಟ್ | ಹುದ್ದೆಗಳ ಮಂಜೂರಾತಿ ಆದೇಶ ಮತ್ತು ದಿನಾಂಕ | ಹುದ್ದೆಗಳ ವಿವರ ಮತ್ತು ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ | ಹುದ್ದೆಗಳ ಕೇಂದ್ರ ಕಾರ್ಯಸ್ಥಾನ/ಕಛೇರಿ |
|---|---|---|---|---|---|---|
| | | | | ಸಾಗಣಿಕೆಗೆ ವಾಹನಗಳನ್ನು ಬಾಡಿಗೆ ಆಧಾರದ ಮೇಲೆ ಒದಗಿಸಲು, ಅಗತ್ಯ ಕೈಪಿಡಿಗಳನ್ನು ಮುದ್ರಿಸಲು ಹಾಗೂ ಇತರೆ ಪ್ರಾಸಂಗಿಕ ವೆಚ್ಚ ಭರಿಸಲು | | |
| | ಯೋಜನೆಯ ಒಟ್ಟು ವೆಚ್ಚ | **110** | | | | **110** |

ಬಿ. ಶಿವರಾಮ ಗೌಡ
ಸರ್ಕಾರದ ಅಧೀನ ಕಾರ್ಯದರ್ಶಿ
ಕಾರ್ಮಿಕ ಇಲಾಖೆ
(ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆ)

**P.R. 515**
**SC - 50**

## HOME SECRETARIAT

**SUB:** Reconstitution of Karnataka Rajya Sainik Board.

**READ:** 1) Government Order No. HD 85 KSS 2009, Dated: 22-10-2009.

2) Director Sainik Welfare & Resettlement letter No. DSWR/23/ RSB/1994-2012, dated 18-08-2012

**PREAMBLE**:

The Karnataka Rajya Sainik Board was reconstituted vide Government order read at (1) above and its period was extended for a period of 3 years.

The Director, Department of Sainik Welfare and Resettlement, Bangalore vide his letter read at (2) above has requested the Government to reconstitute the Karnataka Rajya Sainik Board for a further period of three years dated: 18-08-2012 to 17-08-2015 as per the guidelines of Kendriya Sainik Board, Government of India, Ministry of Defence, New Delhi.

The proposal of the Director, Sainik Welfare and Resettlement has been examined by the Government and hence the following order.

**Government Order No. HD 113 KSS 2012, Bangalore, Dated:09-10-2012.**

In view of above the Government is pleased to re-constitute the Karnataka Rajya Sainik Board with the following personnel for a period of three years with effect from 18-08-2012.

| | | | |
|---|---|---|---|
| 1) | The Chief Minister | - | President |
| 2) | Deputy Chief Minister<br>and Minister for Home &Transport. | - | Senior Vice President |
| 3) | The General Officer,<br>Commanding-in-Chief Southern Command, Pune-4110001 | - | Vice President; |
| 4) | The Air Officer,<br>Commanding-in-Chief, Training Command, IAF, Bangalore-560006 | - | -do- |
| 5) | The Flag Officer,<br>Commanding-in-Chief Western Naval Command, Mumbai-400001 | - | -do- |
| 6) | Principal Secretary to Government,<br>Home Department | - | Ex-officio Member |
| 7) | Principal Secretary to Government<br>Revenue Department. | - | Ex-officio Member |

| | | | |
|---|---|---|---|
| 8) | Principal Secretary to Government<br>Education Deparment (Primary & Secondary Education) | - | -do- |
| 9) | Principal Secretary to Government<br>Urban Development Department | - | -do- |
| 10) | Principal Secretary to Government<br>Dept. of Personnel & Administrative Reforms.(A.R) | - | -do- |
| 11) | Additional Secretary<br>Ex-servicemen Welfare<br>Department, Government of India,<br>South Block, New Delhi. | - | -do- |
| 12) | Principal Secretary to Government (PCAS)<br>Home Department. | - | -do- |
| 13) | Director of<br>Industries and Commerce Department, Bangalore. | - | -do- |
| 14) | Director of Employment and Training, Bangalore. | - | -do- |
| 15) | General Officer Commanding,<br>Karnataka & Kerala Sub-Area, Bangalore. | - | -do- |
| 16) | Air Officer Commanding<br>Air Force Station, Jalahalli, Bangalore. | - | -do- |
| 17) | Naval Station Commander, Bangalore. | - | -do- |
| 18) | Director Resettlement,<br>Southern Zone, Pune | - | -do- |
| 19) | Deputy Director General (States) Recruiting, Karnataka & Kerala Recruiting Zone, Bangalore. | - | -do- |
| 20) | Director,<br>Department of Sainik Welfare and Resettlement, Bangalore. | - | Secretary. |

**NON-OFFICIAL MEMBERS;**

1) Lt. General (Retd) Sampathkumar, PVSM, AVSM,VSM.
2) Air Marshal (Retd) B.U. Chengappa, PVSM, AVSM, VSM.
3) Brigadier (Retd) A.M.R. Prakash, SM **
4) Brigadier (Retd) Marilingappa Ningappa Kadapatti.

The Non-Official members of the Karnataka Rajya Sainik Board are classified under List A of Annexure to KCSRs for the purpose of TA/DA.

The Expenditure of the Committee may be met out of the sanctioned grant under the Head `` 2235-60-200-1-01 (Code No.041), Director Department of Sainik Welfare and Resettlement Establishment charges, Travel Expenses``, during the current and subsequent year.

BY ORDER AND IN THE NAME OF THE GOVERNMENT OF KARNATAKA,
**H.R. PUTTEGOWDA**
Under Secretary to Government,
Home Department, (Police Auxiliary Services)

**P.R. 533**

## INFRASTRUCTURE DEVELOPMENT SECRETARIAT

**Sub:** Servicing of HUDCO Loan availed for procurement of land for Bangalore International Airport Project Release of funds reg.

**Read**
1. G.O.No.IDD 47 DIA 2006 dated: 29-06-2007
2. G.O.No.IDD 47 DIA 2006(P) dated: 24-09-2007
3. G.O.No.IDD 47 DIA 2006(P) dated: 25-09-2007
4. G.O.No.IDD 47 DIA 2006(P) dated: 03-12-2007
5. G.O.No.IDD 47 DIA 2006 dated: 25-03-2008

6. G.O.No.IDD 47 DIA 2006 dated: 23-06-2008
7. G.O.No.IDD 47 DIA 2007 dated: 16-09-2008
8. G.O.No.IDD 47 DIA 2007 dated: 15-12-2008
9. G.O.No.IDD 47 DIA 2006 dated: 13-03-2009
10. G.O.No.IDD 47 DIA 2006 dated: 12-08-2009
11. G.O.No.IDD 47 DIA 2006 dated: 26-09-2009
12. G.O.No.IDD 47 DIA 2006 dated: 17-12-2009
13. G.O.No.IDD 33 DIA 2010 dated: 23-03-2010
14. G.O.No.IDD 33 DIA 2010 dated: 22-06-2010
15. G.O.No.IDD 33 DIA 2010 dated: 23-09-2010
16. G.O.No.IDD 33 DIA 2010 dated: 21-12-2010
17. G.O.No.IDD 33 DIA 2010 dated: 04-03-2011
18. G.O.No.IDD 33 DIA 2010 dated: 21-06-2011
19. G.O.No.IDD 33 DIA 2010 dated: 26-09-2011
20. G.O.No.IDD 33 DIA 2010 dated: 21-12-2011
21. G.O.No.IDD 33 DIA 2010 dated: 20-03-2012
22. G.O.No.IDD 33 DIA 2010 dated: 18-06-2012
23. G.O.No.IDD 33 DIA 2010 dated: 24-09-2012
24. Letter No. DGM (IPD-1)/1914/2012-13 dated: 06-12-2012. of the Deputy General Manager (IPD-I) , KSIIDC, Bangalore.

**Preamble:**

In G.O's read at Sl.No. (1) to (23) above , periodical release of funds have been made to Karnataka State Industrial and Infrastructure Development Corporation (KSIIDC), Bangalore for servicing HUDCO loan for the period 2007-08 to 2011-12 and quarter ending September 2012.

2 . In letter dated 06-12-2012 read at Sl.No. (24) above, the Deputy General Manager (IPD-I), KSIIDC, Bangalore has requested for release of an amount of Rs.344.94 lakhs (Principal Rs.272.58 lakhs +Interest Rs.68.23 lakhs +Service Charges Rs.4.13 lakhs) only towards servicing of HUDCO loan for the quarter ending December 2012.

3. The proposal of KSIIDC has been examined in detail and hence this order.

**GOVERNMENT ORDER NO.IDD 33 DIA 2010 BANGALORE DATED: 15-12-2012.**

After careful examination of the proposal, sanction is accorded for release of Rs.3,40,81,000-00 (Rupees three Crores Forty lakhs Eighty one Thousand only) i.e. (Principal Rs.2,72,58,000-00)+ (Interest Rs.68.23.000-00)to KSIIDC Bangalore towards the instalment for HUDCO loan servicing for the quarter ending December 2012.

3) The Managing Director, KSIIDC, Bangalore is authorized to draw the amount on a payees receipt duly countersigned by the Under Secretary to Government, Infrastructure Development Department **and to pay it to the HUDCO within the due date.**

4) This order issues in accordance with the financial powers delegated to Principal Secretaries/Secretaries to Government Vide G.O.No FD/04/TFP/2012, dated 27-04-2012 & No.FD 8 TFP 2012 Dated: 04.10-2012.

By order and in the name of the Governor of Karnataka ,

**S. J. SAMPATH KUMAR**

Under Secretary to Government,

Infrastructure Development Department.

**P.R. 407**

**ಸಮಾಜ ಕಲ್ಯಾಣ ಸಚಿವಾಲಯ**

**ಸಂಖ್ಯೆ: ಸಕಇ 36 ಎಸ್‌ಡಿಸಿ 2013, ಬೆಂಗಳೂರು, ದಿನಾಂಕ: 25-04-2013.**

**ಸೇರ್ಪಡೆ**

ಸರ್ಕಾರದ ಆದೇಶ ಸಂಖ್ಯೆ: ಸಕಇ 36 ಎಸ್‌ಡಿಸಿ 2013 ದಿನಾಂಕ: 08-03-2013ರ ಆದೇಶ ಭಾಗದಲ್ಲಿ "ಕರ್ನಾಟಕ ಮಹರ್ಷಿ ವಾಲ್ಮೀಕಿ ಪರಿಶಿಷ್ಟ ಪಂಗಡಗಳ ಅಭಿವೃದ್ಧಿ ನಿಗಮ" ಎಂಬ ಪದದ ನಂತರ "ನಿಯಮಿತ" ಎಂಬ ಪದವನ್ನು ಸೇರ್ಪಡೆ ಮಾಡಿದ್ದು, ಅದರಂತೆ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ವಿ.ರತ್ನಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ-3

ಸಮಾಜ ಕಲ್ಯಾಣ ಇಲಾಖೆ.

**P.R. 540**

**SC - 100**

ಸರ್ಕಾರಿ ಕೇಂದ್ರ ಮುದ್ರಣಾಲಯ, ಘಟಕ-2, ಬೆಂಗಳೂರು